* ಅಳಿಲ ಸೇವೆ ಗ್ರಂಥಮಾಲೆಯ ೧೨ನೆಯ ಕುಸುಮ *

# ನೆರೆಮನೆಯ ಹುಡುಗಿ

ಮತ್ತು ಇತರ ಕತೆಗಳು

ಶ್ರೀ. ಎಮ್. ಗೋವಿಂದ ಪೈ, ಮಂಜೇಶ್ವರ,
ಇವರ ಮುನ್ನುಡಿಯೊಡನೆ

ಎಸ್. ಪಿ. ಭಟ್ಟ

೧೯೪೧

* ಮಿತ್ರಮಂಡಳಿ, ಮಂಗಳೂರು *

ಎಚ್. ಎಸ್. ಕಾಮತರ ನೆನಪಿಗೆ

# ಕನ್ನಡಿಗರಿಗೆ

ಕನ್ನಡದ ಹಿರಿಯರಿರ!
ಕನ್ನಡದ ಕಿರಿಯರಿರ!
ಕನ್ನಡದ ಈ ಚೆನ್ನು—
　　ಇದುವೆ ನಿಮಗಾಗಿ,
　　ಇದು ಇಂದಿಗಾಗಿ.

ಕನ್ನಡದ ಮಕ್ಕಳಿರ!
ಕನ್ನಡದ ಮರಿಗಳಿರ!
ಕನ್ನಡದ ಈ ಚೆನ್ನು—
　　ಇದುವೆ ನಿಮಗಾಗಿ,
　　ಇದು ನಾಳೆಗಾಗಿ.

ಕನ್ನಡದ ಚೆಲುವೆಯರೆ!
ಕನ್ನಡದ ಚೆನ್ನಿಗರೆ!
ಕನ್ನಡದ ಈ ಚೆನ್ನು—
　　ಇದುವೆ ನಿಮಗಾಗಿ,
　　ಎಂದೆಂದಿಗಾಗಿ.

# ಮುನ್ನುಡಿ

ಇಂದಿಗೆ ಸುಮಾರು ೪೦ ವರ್ಷಗಳ ಹಿಂದೆ 1900ನೆಯ ಜುಲಾಯಿಯಲ್ಲಿ ಮಂಗಳೂರಲ್ಲಿ ಸುವಾಸಿನಿ ಎಂಬ ಮಾಸಪತ್ರಿಕೆ ಹೊರವಂಟಿತು. ಅಲ್ಲಿಂದ ಕೆಲವೇ ತಿಂಗಳಲ್ಲಿ, 1901ನೆಯ ಜನವರಿಯಲ್ಲಿ, ಅಂದಿನ ಕನ್ನಡ ಸಾಹಿತ್ಯದಲ್ಲಿ ಶಿಶಿರಾತ್ಯಯದ ಕೋಗಿಲೆಯಂತಿದ್ದ ಹಾಗೂ ಸಮಗ್ರ ಕನ್ನಡ ಸಾಹಿತ್ಯದ ಸೀಮಾ ಪುರುಷರಲ್ಲಿ ಒಬ್ಬರಾದ ಶ್ರೀಶ್ರೀ ನಂದಳಿಗೆಯವರು ದಿವಂಗತ ರಾದರು. ಅಲ್ಲಿಂದ ಮುಂದೆ ಕನ್ನಡ ಸಾಹಿತ್ಯದಲ್ಲಿ ಇಂದಿನ ನವಯುಗವು ಉಪಕ್ರಮಿಸಿತೆನ್ನಬಹುದು. ಈ ಹೊಸ ಸಾಹಿತ್ಯದ ವಿಶಿಷ್ಟವಾದ ರೂಪಗಳಲ್ಲಿ ಸಣ್ಣಕತೆಯೂ ಒಂದು. ನಾನು ಬಲ್ಲಷ್ಟರ ಮಟ್ಟಿಗೆ ಕನ್ನಡ ಸಣ್ಣಕತೆ ನಮ್ಮ ತುಳುನಾಡಿನಲ್ಲಿ ಹುಟ್ಟಿತು, ಸುವಾಸಿನಿಯ ತೊಟ್ಟಿಲಲ್ಲಿ ಬೆಳೆಯಿತು.

ಸುವಾಸಿನಿಯಲ್ಲಿ ಸಣ್ಣಕತೆಗಳನ್ನು ಮೊದಲುಮಾಡಿದವರು ಶ್ರೀಶ್ರೀ ಪಂಜೆ ಮಂಗೇಶರಾಯರು. ಅವರಿಗೂ ಅವರ ಜತೆಯ ಕತೆಗಾರರಾದ ಶ್ರೀಮಾನ್ ಉಳ್ಳಾಲ ಮಂಗೇಶರಾಯರಿಗೂ ಆವಂದಿನ Strand Magazine ಇತ್ಯಾದಿ ಆಂಗ್ಲ ಮಾಸಪತ್ರಿಕೆ ಗಳಲ್ಲಿ ಪ್ರಕಟವಾಗುತಿದ್ದ ಆ ಕೆಲವು ಸಣ್ಣಕತೆಗಳೇ ಹೊರತು ಬೇರೆ ಗೊತ್ತಿರಲಿಲ್ಲ. ಇದೇನೂ ಸೋಜಿಗವಲ್ಲ. ಏಕೆಂದರೆ ಆಗಣ ಆಂಗ್ಲ ಕಥಾನಕ ಸಾಹಿತ್ಯವೂ ಇಂದಿನಂತೆ ಹೇರಳವಾಗಿರಲಿಲ್ಲ, ಇದ್ದ ವಿರಳವೂ ನೀಡಿದ ಎಲ್ಲಾ ಕೈಯ್ಗಳಿಗೆ ನಿಲುಕುತಿದ್ದಿಲ್ಲ. ಹೆಚ್ಚಿನ ಓದುಗರಿಗೆ ಇದ್ದುವೆಂದರೆ ಮಂಗಳೂರಿನ ಒಂದೆರಡು ಶಾಲೆಗಳಲ್ಲಿ ತರಿಸುತಿದ್ದ ಕೆಲವು ಮಾಸಪತ್ರಿಕೆಗಳಲ್ಲಿಯ ಆ ಸಣ್ಣ

ಕತೆಗಳೇ. ಪಂಜೆಯವರು ತಾವು ಓದಿದ ಕತೆಗಳನ್ನು ಕನ್ನಡಿಸದೆ ಆ ಕಥಾಕಲೆಯನ್ನು ಕನ್ನಡಿಸಿದ ಕಾರಣ, ಕನ್ನಡ ಸಾಹಿತ್ಯದಲ್ಲಿ ಬರುವಂದೇ ಸಣ್ಣಕತೆ ಕನ್ನಡಿಗನಾಗಿ ಬಂದಿತು, ಕನ್ನಡಿಗನಾಗಿಯೇ ನಿಂದಿತು.

ಆದರೆ ಅವರು ಬಾರಿಸಿದ ಆ ಅಪೂರ್ವ ಉದಯರಾಗದ ಪಲ್ಲವಿಯೇ ತೀರದಷ್ಟರಲ್ಲಿ, ಅದಕ್ಕೆ ಸಾಕಷ್ಟು ಮಂದಿಯ ಕಿವಿ ನಿಗುರುವಷ್ಟರಲ್ಲಿ, ಅವರ ಕಿನ್ನರಿಯ ತಂತಿ ಕಡಿಯಿತು, ಹಾಡು ತಡೆಯಿತು. 1903ರಲ್ಲೇನೋ ಸುವಾಸಿನಿ ನಿತ್ತಿತು, ಅದರೊಂದಿಗೆ ಪಂಜೆಯವರ ಲೇಖನಿಯೂ ನಿತ್ತಿತು. ಆ ಬಳಿಕ ಅವರು ಬೇರೆ ಕತೆಗಳನ್ನು ಬರೆಯಲೂ ಇಲ್ಲ, ಬರೆದವನ್ನು ಪ್ರಕಟಿಸಲೂ ಇಲ್ಲದೆ, ತಾವು ತೊಡಗಿದ ಜೇನಹುಟ್ಟನ್ನು ಕಟ್ಟಿದಷ್ಟಕ್ಕೆ ಬಿಟ್ಟುಬಿಟ್ಟರು. ಮುಂದೆ ಆ ಜೇನುಗೂಡು ಕನ್ನಡನಾಡಿಗೆ ಒಂದಾಯಿತು.

ತರುವಾಯ 1912ರಲ್ಲೇನೋ(?) ಶ್ರೀಶ್ರೀ ಎಮ್. ಎನ್. ಕಾಮತರು ಸಣ್ಣಕತೆಗಳನ್ನು ಬರೆಯತೊಡಗಿದರು, ಕೊನೆಯ ವರೆಗೂ ಅನೇಕ ಕತೆಗಳನ್ನೂ ಬರೆದರು, ತಮ್ಮದೇ ಎಂಬ ಉತ್ತಮವಾದೊಂದು ಕಥಾಸಾಹಿತ್ಯವನ್ನೂ ಕನ್ನಡಕ್ಕೆ ಬಿಟ್ಟು ಹೋದರು.....ಶ್ರೀಮಾನ್ ಶ್ರೀನಿವಾಸರು ಸಣ್ಣಕತೆಗಳನ್ನು ಯಾವಂದಿನಿಂದ ಬರೆಯಲಾರಂಭಿಸಿದರೊ ನಾನರಿಯೆ. ಅವರ 'ಕೆಲವು ಸಣ್ಣ ಕತೆಗಳು' 1920ರಲ್ಲಿ ಪ್ರಕಟವಾದುವು. ಅಲ್ಲಿಂದ ಇಲ್ಲಿಗೂ ಅವರ ಕತೆಗಳ ಸುಗ್ಗಿ ಸರಾಗವಾಗಿ ಸಾಗಿಬಂದದೆ. ಅವರು ತಮ್ಮ ಆ ಉತ್ಕೃಷ್ಟವಾದ ಕತೆಗಳಿಂದ ಕನ್ನಡ ಸಾಹಿತ್ಯ ದಲ್ಲಿ ಒಂದು ಹೊಸ ಸೃಷ್ಟಿಯನ್ನೇ ನಿರ್ಮಿಸಿರುತ್ತಾರೆ. In his hand the thing became a trumpet: ಅವರ ಕೈಯ್ಯಲ್ಲಿ ಸಣ್ಣಕತೆ ತುತೂರಿಯಾಯಿತು, ಅದರ ಕರೆಹವು ನಾಲ್ಕು ದಿಕ್ಕಿಗೂ ಕೇಳಿಸಿತು, ನಾಲ್ಕೂ ದಿಕ್ಕಿಂದ ಮಾರ್ಮೊಳಗನ್ನು ಪಳಿಸಿತು. ಹೀಗೆ

ಕನ್ನಡ ಕಥಾಸರಿತ್ತು ಸಾಹಿತ್ಯಸಾಗರವನ್ನು ಸೇರಿತು; ತಾನು ಸಾಹಿತ್ಯವೂ ಆಯಿತು, ಸಾಗರವೂ ಆಯಿತು.

ಈಗಲಾದರೊ ಕನ್ನಡದಲ್ಲಿ ಸಣ್ಣಕತೆಗಳು ಎಷ್ಟೆಂದಿಲ್ಲ. ಮಾಸದ ಭವಿಷ್ಯ, ವಾರದ ಭವಿಷ್ಯವಿಲ್ಲದ ಪತ್ರಿಕೆಗಳು ಇರಬಹುದೇನೋ, ಆದರೆ ಸಣ್ಣಕತೆಗಳು ಇಲ್ಲದ ಪತ್ರಿಕೆಗಳಿಲ್ಲ. ಕೆಲವು ಪತ್ರಿಕೆಗಳು ಕತೆಗಳಿಗೆಂದೇ ತೆಗೆದಿಟ್ಟವೆ; ಅವಲ್ಲಿ ಹೇಗೂ ಅಥ ಎಂದ ಇತಿ ವರೆಗೆ ಸಣ್ಣಕತೆಗಳೇ. ಕುಮಾರವ್ಯಾಸನಂದು ರಾಮಾಯಣದ ಕತೆಗಳ ಭಾರದಿಂದ ತಿಣುಕಿದನೆಂಬ ಫಣಿರಾಯನು ಇಂದೂ ತಿಣುಕುವನಾದರೆ ಸಣ್ಣಕತೆಗಳ ಭಾರದಿಂದ. ಈ ಕತೆಗಳೆಲ್ಲವೂ ಓರಂತೆ ಸಾಹಿತ್ಯವೇ? ಈ ಹಚ್ಚೆಲೆಗಳ ದಟ್ಟಣೆಯಲ್ಲಿ ಇತರ ಬಗೆಯ ಸಾಹಿತ್ಯವು, ಮುಖ್ಯತಃ ಕಾದಂಬರಿಗಳೆಂಬ ದೊಡ್ಡ ಕತೆಗಳು, ಬೇಕಾದಂತೆ ಫಲಿಸಲುಂಟೇ? ಎಂದು ಎಷ್ಟೋ ಮಂದಿ ಮೂಗು ಮುರುಕುವುದುಂಟು. ನನಗಾದರೊ ಹಾಗೆನಿಸುವುದಿಲ್ಲ. ಏಕೆಂದರೆ ಇಂದಿನ ಕನ್ನಡ ಸಾಹಿತ್ಯದ ಇನ್ನೂ ಈ ಎಳೆಪಗಲಿನಲ್ಲಿ ಅದಕ್ಕೆ ಏನಿದ್ದರೂ ಬೇಕು, ಎಷ್ಟಿದ್ದರೂ ಬೇಕು. ಅದು ಹೊಲ್ಲ, ಇದು ಸಲ್ಲ ಎಂಬ ಹೊತ್ತು ಇದಲ್ಲ. ಬರೆದಷ್ಟೂ ಇಲ್ಲವೆ ಪ್ರಕಟವಾದಷ್ಟೂ ಸಾಹಿತ್ಯಕ್ಕೆ ದಕ್ಕಿತೇ? ಇಟ್ಟ ತತ್ತಿಗಳಷ್ಟೂ ಹಕ್ಕಿಗಳಾದುವೇ? ಅವಲ್ಲಿ ಕಾಲನಿಗೆ ಎಷ್ಟು ವಟ್ಟ ಹೋಗಬೇಡ? ಅಥವಾ ಯಾವುದು ಸಾಹಿತ್ಯ? ಯಾವುದು ಅಸಾಹಿತ್ಯ? ಎಂದು ಇತ್ಯರ್ಥಿಸುವುದಾದರೂ ಯಾರು? ಇಂದಿನವರೇ? ಸರ್ವಥಾ ಅಲ್ಲ. ಯಾರೂ ತಮ್ಮಿಂದಿನ ಸಾಹಿತ್ಯದ ನೇರಾದ ವಿವೇಚಕರಲ್ಲ. ತಮ್ಮಿಂದಿನವರಲ್ಲಿ ಯಾರಿಗೆ ತಾನೆ ನಮ್ಮ-ನಿಮ್ಮತನವಿಲ್ಲ? ಇಂದಿನ ಸಾಹಿತ್ಯದ ಸಾರಾಸಾರವಿಚಾರಕ್ಕೆ ಮುಂದಿನ ಭವಿಷ್ಯವೇ ಈಡು. ನಮ್ಮಿಂದಿನ ಯಾವತ್ತೂ ದವಸವನ್ನು ಕಣಜದಲ್ಲಿ ಕಾದಿಡುವುದಷ್ಟೇ ನಮ್ಮ ಕೆಲಸ, ಅದನ್ನು ಕೇರಾಡಿಸಿ ಕಾಳನ್ನೂ ಜಾಳನ್ನೂ ವಿಂಗಡಿಸುವುದಾದರೊ ಭವಿಷ್ಯದ ಕೆಲಸ. ನಾವೇತಕ್ಕೆ ಸುಮ್ಮನೆ

ಅದಕ್ಕೆ ಕೆಯ್ದುಡುಕಬೇಕು? ಇಂದಿನ ಕತೆಗಳೆಲ್ಲವೂ ಒಂದೇ ಸವನಾಗಿ ಅಗಿನೆಯ ಸಾಹಿತ್ಯವಲ್ಲದಿರಬಹುದೇನೋ, ಆದರೆ ಓದು ವವರಲ್ಲಿ ಹೆಚ್ಚಿನ ಮಂದಿಗೆ ಬೇಕಾದುದು ನೀರು ಮುಟ್ಟಿಸದ ಸಾಹಿತ್ಯವಲ್ಲ, ಯಾವ ರುಚಿಗೂ ಒಗ್ಗುವ ಹವಣಾದ ಸಾಹಿತ್ಯ, ಯಾವ ಮನಸ್ಸನ್ನೂ ಬುಲ್ಲವಿಸುವ ಸಾಹಿತ್ಯ. ಆ ಮನೋರಂಜನ ವನ್ನು ಮುಖ್ಯವಾಗಿ ಪತ್ರಿಕೆಗಳು ಕೆಯ್ಗೂಡಿಸಲಾಪವೆಂದರೆ ಅಲ್ಲಿ ಗಲ್ಲಿ ಮುಗಿವ ಸಣ್ಣಕತೆಗಳಿಂದ ತಾನೆ. ಅಂಥಾ ವಿನೋದವನ್ನು ಅಳವಡಿಸುವಲ್ಲಿ ಇಂದಿನ ಕನ್ನಡ ಕತೆಗಳೇನು ಕಡಿಮೆಯೋ? ಅದ ಲ್ಲದೆ ಇಂದಿನ ಕನ್ನಡದಲ್ಲಿ ಮಹಾಕಾವ್ಯಗಳೂ ವಚನಕಾವ್ಯಗಳೂ ನಾಟಕಗಳೂ ಕಾದಂಬರಿಗಳೂ ಮೊದಲಾದ ಮೇಲುತರದವೆಂಬ ಸಾಹಿತ್ಯವಿಶೇಷಗಳಲ್ಲಿ ಕೆಲವು ಹೆಚ್ಚುಕಡಿಮೆ ಇಲ್ಲದೇ ಇರುವು ದಕ್ಕೂ ಮಿಕ್ಕವು ಇರಬೇಕಾದಷ್ಟು ಇಲ್ಲದಿರುವುದಕ್ಕೂ ಪ್ರಾಯಶಃ ಆ ಋತೂದಯಕ್ಕೆ ಕಾಲವಿನ್ನೂ ವಾಗುತ್ತದಷ್ಟೇ ಎಂಬ ಕಾರಣ ವಲ್ಲದೆ ಸಣ್ಣಕತೆಗಳ (ಹಾಗೂ ಭಾವಗೀತೆಗಳ) ಬಾಹುಳ್ಯವಲ್ಲ.

ಆದರೆ ಸಣ್ಣಕತೆಗಳಲ್ಲಿ ಬರೆವವರಿಗೆ ಅಷ್ಟು ಗೆಲವೇಕೆ? ಓದುವವರಿಗೆ ಇಷ್ಟು ಒಲವೇಕೆ? ಇಂದಿನ ಜೀವನಸಂಗ್ರಾಮದ ದೆಸೆಯಿಂದೇನೋ ಬರೆಹಗಾರರಿಗೆ ಉದ್ದುದ್ದ ಬರೆಯಲಿಕ್ಕೂ ಓದು ಗಾರರಿಗೆ ಉದ್ದುದ್ದ ಓದಲಿಕ್ಕೂ ಮನಸ್ಸೂ ಬಾರದ ಹೊತ್ತೂ ಸಾಲದ ಈ ನವಯುಗದ ಉಭಯಸಂಕಟದಲ್ಲಿ ಕಡಿಮೆಯಿಂದ ಕಡಿಮೆ ಹೊತ್ತಿನಲ್ಲಿ ಶಾನೆಯಿಂದ ಶಾನೆ ಮನೋರಂಜನವನ್ನು ಒದಗಿಸಬಲ್ಲ ಸಾಧನವೆಂದರೆ ಕಾದಂಬರಿಯಲ್ಲ, ಕಥಾನಕವೇ. ದೊಡ್ಡಕತೆಗಳ ಮುಂದೆ ಸಣ್ಣಕತೆಗಳೆಂದರೆ ನಡೆದಷ್ಟುಳ್ಳ ವನ ಭೂಮಿಗಳ ಮುಂದೆ ಕಣ್ಣಳತೆಯೊಳಗುಳ್ಳ ಉಪವನಗಳಂತೆ. ಅವು ಗಳ ಪೆಂಪು ಇವುಗಳಿಗಿಲ್ಲವಾದರೆ ಇವುಗಳ ಸೊಂಪೂ ಅವುಗಳಿ ಗಿಲ್ಲ. ಆದಕಾರಣವೇನೋ ವನಕ್ಕಿಂತ ಉಪವನವಪ್ಪೇ ಇಂದಿನ ನಾಗರಿಕರ ಮೆಚ್ಚು. ಒಂದು ದೊಡ್ಡಕತೆಯನ್ನು ಓದುವ ಹಾಗೂ

ಬರಿವ ಹೊತ್ತಿನಲ್ಲಿ ಹತ್ತು ಸಣ್ಣಕತೆಗಳನ್ನು ಹೇಗೂ ಓದಬಹುದು, ಒಂದು ವೇಳೆ ಬರೆಯಲೂ ಬಹುದು ಮಾತ್ರವಲ್ಲ, ಆ ಹತ್ತು ಕತೆಗಳಲ್ಲಿ ವ್ಯಕ್ತಿಗಳೆಷ್ಟು! ಘಟನೆಗಳೆಷ್ಟು! ವೈವಿಧ್ಯವೆಷ್ಟು! ವಿನೋದವೆಷ್ಟು! ಇಂಥಾ ಸಂತೆಯ ಕೂಟವನ್ನು ಯಾರೊಲ್ಲ? ಅದಲ್ಲದೆ ಯಾವುದೇ ಒಂದು ಭಾವನೆಯನ್ನು ಮೂರ್ತಿಗೊಳಿಸಲಿಕ್ಕೆ ಸಣ್ಣ ಕತೆ(ಹಾಗೂ ಭಾವಗೀತೆ)ಯಷ್ಟು ಸುಲಭವೂ ಅನುಕೂಲವೂ ಆದ ಸಾಧನವು ಸಾಹಿತ್ಯದಲ್ಲಿ ಬೇರೆ ಇಲ್ಲ. ಚಿಕ್ಕ ಹಕ್ಕಿಗಳು ಪೂರಕ್ಕೆ ಹಾರವಾದರೆ ಬಣ್ಣದಲ್ಲಿಯೂ ಹಾಡಿನಲ್ಲಿಯೂ ಸೊಗಸಾಗಿರುವಂತೆ, ಇವುಗಳೂ ಉದ್ದಕ್ಕೆ ಸಾಗವಾದರೆ ಸೌಂದರ್ಯದಲ್ಲಿಯೂ ಮಾಧುರ್ಯದಲ್ಲಿಯೂ ಮಿಗಿಲಾಗಿವೆ; ಯಾವ ಭಾವನೆಗೂ ಒಪ್ಪುತ್ತವೆ, ಯಾರ ಮನಸ್ಸನ್ನೂ ಸೆಳೆಯುತ್ತವೆ.

ಹೆಚ್ಚು ಮಂದಿ ಭಾವಿಸಬಹುದೇನೋ, ಕತೆ ದೊಡ್ಡದಿರಲಿ ಸಣ್ಣದಿರಲಿ, ಅದು ವಾಸ್ತವಿಕ ಜೀವನದ ನೊಣಪ್ರತಿ ಎಂದು, ಇಲ್ಲವೆ ಸಂಸಾರಕ್ಕೆ ಎತ್ತಿ ಹಿಡಿದ ಕನ್ನಡಿ ಎಂದು. ಆದರೆ ನೊಣಪ್ರತಿಯಲ್ಲಿ ಬುದ್ಧಿಶಕ್ತಿ ಇಲ್ಲ, ಕನ್ನಡಿಯ ಪ್ರತಿರೂಪದಲ್ಲಿ ಜೀವಶಕ್ತಿ ಇಲ್ಲ. ಕತೆಯಾದರೊ ಒಂದು ಕಲೆ, ಸಾಹಿತ್ಯಕಲೆ; ಕಲೆಯಲ್ಲಿ ಬುದ್ಧಿಶಕ್ತಿಯೂ ಇದೆ, ಜೀವಶಕ್ತಿಯೂ ಇದೆ. ಜೀವನಕ್ಕೆ ಸಾಹಿತ್ಯವೆಂದರೆ ಎಚ್ಚರಕ್ಕೆ ಕನಸಿದ್ದ ಹಾಗೆ. ಎಚ್ಚರ ನೈಜ, ಕನಸು ಅನ್ಯೈಜ. ಜೀವನದಲ್ಲಿ ನೈಜವನ್ನು ಕಂಡೂ ಉಂಡೂ ಬೇಸತ್ತ ಮನುಷ್ಯನ ಸಹಜವಾದ ವಿಹಾರವೆಂದರೆ ಅನ್ಯೈಜದ ಸಾಧನೆ, ಹೊನ್ನಹುಲ್ಲೆಯ ಬೇಟೆ; ಆ ಬಗ್ಗೆ ಆತನ ವಿಹಾರಭೂಮಿಯೆಂದರೆ ಸಾಹಿತ್ಯವೆಂಬ ಆ ವಿಶ್ವಾಮಿತ್ರಸೃಷ್ಟಿ. ಈ ಮಾಯಾಮೃಗದ ಬೇಟೆಯನ್ನು ಆಡಲೆಷ್ಟೋ ಅಷ್ಟೇ ನೋಡಲೂ ಮೆಚ್ಚು. ಕಾರಣವೇನೆಂದರೆ ಜೀವನಕ್ಕೆ ಇರುವಂತೆ ಸಾಹಿತ್ಯಕ್ಕೆ ಎಲ್ಲೆ ಇಲ್ಲ.

ದೊಡ್ಡಕತೆಗಳನ್ನು ಬರೆವಾಗ ಅವಶ್ಯವಾಗಿ ಇರುವಂತೆ ಸಣ್ಣವನು: ಬರೆವಲ್ಲಿ ಘಟನೆಗಳ ಗೊಂದಳವೂ ಇಲ್ಲ, ಮಂದಿಗಳ

ಮೊತ್ತವೂ ಇಲ್ಲ: ಆಕಾರಣ ಸಣ್ಣಕತೆಗಳನ್ನು ಬರೆವುದು ಅಷ್ಟೇನೂ ದುಷ್ಕರವಲ್ಲ, ಅದೊಂದು ವೇಳೆ ಎಡತರದ ಕಲೆ ಏನೋ ಎಂದು ಮಾತ್ರ ಬಗೆಯಬಾರದು. ಏಕೆಂದರೆ ಕತೆ ಸಣ್ಣದೆಂಬ ಮಾತ್ರದಿಂದ ಕಲೆಯೂ ಸಣ್ಣದಾಗದು. ರತ್ನದ ತೇಜವು ಅದರ ಸೀರನ್ನಲ್ಲದೆ ಆಯವನ್ನು ಹೊಂದಿಲ್ಲ. ಕೃತಿಯೇ ಕಲೆಯ ಪ್ರಮಾಣವಲ್ಲದೆ ಅದರ ಉದ್ದಗಲವಲ್ಲ. ಹೆಗ್ಗಲ್ಲಿನಲ್ಲಿ ಗೊಮ್ಮಟ ಮಹಾಮೂರ್ತಿಯನ್ನು ಕೆತ್ತಿದ ಶಿಲ್ಪವೂ ಕಲೆ, ಅಕ್ಕಿಯ ಕಾಳಿನಲ್ಲಿ ವೇಣುಗೋಪಾಲ ಮೂರ್ತಿಯನ್ನು ಕೊರೆವ ಶಿಲ್ಪವೂ ಕಲೆ. ರತ್ನವು ಕಿರಿದಾದಷ್ಟಕ್ಕೆ ಸಾಣೆಯ ಕೆಲಸವು ಇನ್ನೂ ಪ್ರಯಾಸವೇನೋ.

ಸಣ್ಣಕತೆಗಳ ರಚನೆಗೂ ಇಂಥವೇ ಎಂಬ ಕಟ್ಟಳೆಗಳಿವೆ. ಅವಲ್ಲಿ ಮುಖ್ಯವಾದುವೆಂದರೆ— ಸಣ್ಣಕತೆಯಲ್ಲಿ ತುದಿಯಿಂದ ತುದಿ ವರೆಗೆ ಕಲ್ಪನೆಯ ಬೆಳಕು ನೇರಾಗಿರಬೇಕು; ಅದರಲ್ಲಿ ಬಳಸುವ ಸಾಧನವು ಪರಿಮಿತವಾಗಿರಬೇಕು; ಅದರಿಂದ ಮೂಡುವ ಭಾವಸವು ಏಕರಸವಾಗಿರಬೇಕು. ಜತೆಗೆ ಯಾವುದೊಂದು ತತ್ತ್ವವೂ ಕತೆಯಲ್ಲಿರಬೇಕು. ಈ ನೇಮಗಳಾದರೂ ಅಸಾಮಾನ್ಯರಿಗಲ್ಲ; ಏಕೆಂದರೆ ಲಕ್ಷ್ಮಣನು ಎಳೆದಿಟ್ಟ ಗೆರೆಗಳನ್ನು ಭೂಜಾತೆ ಮೀರದಿದ್ದಲ್ಲಿ, ರಾಮಾಯಣವೆಲ್ಲಿಂದ?

ಈ ಕತೆಗಳನ್ನು ರಚಿಸಿದ ಶ್ರೀಮಾನ್ ಎಸ್. ಪಿ. ಭಟ್ಟರು ಕೆಲವು ವರ್ಷಗಳ ಹಿಂದೆ ಉದಯಭಾರತದ ಸಂಪಾದಕರಾಗಿದ್ದಾಗಲೇ ಮೊಗ್ಗೆಯಲ್ಲಿಯ ಕತೆಗಾರರಾಗಿದ್ದರು. ಈಗ ಅವರು ಇದೊಂದು ಕಮ್ಮಗಾದ ಹೂಬಗಸೆಯನ್ನು ಕನ್ನಡಿಗರಿಗೆ ನೀಡಿರುತ್ತಾರೆ. ಇದರಲ್ಲಿ ಆರು ಕತೆಗಳಿವೆ, ಆರೂ ಪ್ರೇಮವಿಷಯಕವಾಗಿವೆ. ಆದರೆ ಪ್ರೇಮವನ್ನು ಆಯಾ ಕತೆಯಲ್ಲಿ ಆಯಾ ಬೇರೆ ದೃಷ್ಟಿಕೋಣದಿಂದ ನಿರ್ವರ್ಣಿಸಿರುವ ಕಾರಣ, ಈ ಕಥಾಮಾಲಿಕೆ ತಾಳ ಒಂದೇ ಆದರೂ ಬೇರೆಬೇರೆ ರಾಗಗಳ ಬೇರೆಬೇರೆ ಸೊಲ್ಲುಗಳುಳ್ಳ ರಾಗಮಾಲಿಕೆಯಂತಿದೆ. ಈ ಕತೆಗಳ ಮತ್ತೊಂದು

ವಿಶೇಷವೆಂದರೆ, ಹಾಗೋ? ಹೀಗೋ? ಎಂದು ಓದುಗರಿಗೆ ಅಲ್ಲಲ್ಲಿ ಆಗುವ ಆಂದೋಲನ. ರೋಹಿಣಿ ಹೇಗೆ ಸತ್ತಳು? ದೊಡ್ಡ ಮಾಮನ ಕಾರಿನಲ್ಲಿ ಸುಶೀಲೆ ಕುಳಿತಿದ್ದುದನ್ನು ಕಂಡೇ ಮನೋಹರನಿಗೆ ದಿಗ್ಭ್ರಾಂತಿಯಾಯಿತೇ? ರಮಾನಂದನ ಬೇಟ ನಳಿನಿಯಲ್ಲಿ, ಕೂಟ ಸರಸೆಯಲ್ಲಿಯೇ? ಆನಂದನು ಅಷ್ಟು ಅಕಾಂಡವಾಗಿ ಹೇಗೆ ಸತ್ತನು? ತಾನಿದ್ದಲ್ಲಿಗೆ ಮೋಹಿನಿ ಬರುವುದಕ್ಕೆ ಮೊದಲೊ? ಅಲ್ಲ, ಆಕೆ ಬಂದ ಮೇಲೊ? ಇವೇ ಮೊದಲಾದ ಶಂಕೆಗಳನ್ನು ನಿವಾರಿಸೋಣ ಅಂದರೆ, ಎಷ್ಟು ಕುಕ್ಕಿದರೂ ಆ ವ್ಯಕ್ತಿಗಳೂ ಬಾಯಿ ಬಿಡವು, ಎಷ್ಟು ಸೋಸಿದರೂ ಆ ಸಂದರ್ಭಗಳೂ ಗುಟ್ಟುಕೊಡವು. ಏಕೆಂದರೆ ಈ ಮಂಗಮುಷ್ಟಿಯೂ ಕಥಾಕಲೆಯ ಒಂದು ಲಕ್ಷಣ. ಇದ್ದುದೆಲ್ಲವನ್ನು ಕತೆಗಾರನು ಹೇಳಿಬಿಟ್ಟರೆ, ಕತೆಯಲ್ಲಿ ಮತ್ತೇನಿದೆ?

ಈ ಕತೆಗಳಲ್ಲಿಯ ಪ್ರತ್ಯೇಕ ವ್ಯಕ್ತಿಗೆ ತನ್ನದೆಂಬ ವ್ಯಕ್ತಿತ್ವವಿದೆ. ಒಂದು ವ್ಯಕ್ತಿಯು ಎರಕದಲ್ಲಿ ಮತ್ತೊಂದನ್ನು ಹುಯ್ದಿಲ್ಲ, ನಿರ್ಜೀವವಾದ ಯಾವೊಂದು ವ್ಯಕ್ತಿಯೂ ಇಲ್ಲ. ಇದರಿಂದ ಈ ಕತೆಗಾರರ ನಿರ್ಮಾಣಶಕ್ತಿ ಸಂಕುಚಿತವಲ್ಲ ಎಂಬಂತೆಯೇ ಇವರ ಪಾತ್ರವಿಕಾಸನಶಕ್ತಿ ಸಜೀವವೆಂದೂ ಖಚಿತವಾಗುತ್ತದೆ. ಈ ಕತೆಗಳೆಲ್ಲವೂ ಸೊಗಸಾಗಿವೆ. ಆದರೆ 'ವಿಲುಪ್ತ ವಸ್ತು' ಹೇಗೂ ಮಿಕ್ಕವಕ್ಕಿಂತ ಎಷ್ಟೋ ಮೇಲಾಗಿದೆ, ಈಗಲೇ ಉತ್ತಮ ಕತೆಗಳ ಸಾಲಿನಲ್ಲಿದೆ. ಕಥಾಸಾಹಿತ್ಯದಲ್ಲಿ ಆಸ್ಥೆಯುಳ್ಳವರು ಅದಕ್ಕೆ ತಲೆದೂಗಬೇಕು. ಬೆರಳಲ್ಲಿ ಎಣಿಸುವಷ್ಟಾದರೂ ಅಂಥಾ ಕತೆಗಳನ್ನು ಬರೆವ ಕತೆಗಾರನಿಗೆ ಸಾಹಿತ್ಯದಲ್ಲಿ ಮೀಸಲಾದ ಸ್ಥಾನವಿದೆ. ಶ್ರೀಮಾನ್ ಭಟ್ಟರು ಆ ಸ್ಥಾನವನ್ನು ಸಂಪೂರ್ಣವಾಗಿ ಪಡೆಯಲೆಂದು ಈ ಕತೆಗಳನ್ನು ಓದುವ ಕನ್ನಡಿಗರಲ್ಲಿ ಯಾರೂ ಹಾರಯ್ಸದೆ ಇರಲಾರರು.

ಮಂಜೇಶ್ವರ
ವೃಷ ಸಂ| ಜ್ಯೇಷ್ಠ ಶುಕ್ಲ ೫ **ಗೋವಿಂದ ಪೈ**
೩1 ಮೇ 1941

# ಮಾಲೆಯ ಪರವಾಗಿ ಮಾತು

ಶ್ರೀಮಾನ್ ಎಸ್. ಪಿ. ಭಟ್ಟರ ಕತೆಗಳನ್ನು ಅಖಿಲಸೇವೆ ಗ್ರಂಥಮಾಲೆಯಲ್ಲಿ ಪೋಣಿಸಿ ಕನ್ನಡಿಗರಿಗೆ ಅರ್ಪಿಸಲು ಬಹಳ ಸಂತೋಷವಾಗುತ್ತದೆ. ಶ್ರೀಮಾನ್ ಎಸ್. ಪಿ. ಭಟ್ಟರು ತಮ್ಮ ವಿದ್ಯಾರ್ಥಿದಶೆಯಿಂದಲೂ ಕನ್ನಡದ ಅಭಿಮಾನಿಗಳಾಗಿದ್ದು, ತಮ್ಮ ತನುಮನೋಧನಗಳಿಂದ ಕನ್ನಡದ ಸೇವೆ ಮಾಡಿದ್ದರೂ, ಅವರು ಒಬ್ಬರು ಕನ್ನಡದ ಕತೆಗಾರರು ಎಂಬ ಅಂಶವು ನನಗೆ ಈಚೆಗೆ ತಿಳಿದು ಬಂತು. ಆದರೆ ಅವರ ಜೀವನದಲ್ಲಿ, ಅವರ ಸಂಸ್ಕೃತಿಯಲ್ಲಿ ಒಂದು ತರದ ಕಲಾಪೂರ್ಣತೆಯಿದೆ, ಒಂದು ತರದ ತತ್ವಪೂರ್ಣತೆ ಯಿದೆ, ಎಂದು ನನಗಾಗಾಗ ತೋರುತ್ತಿದ್ದು, ಅವರೇಕೆ ತಮ್ಮ ಜೀವನಕ್ಕೆ, ತಮ್ಮ ವ್ಯಕ್ತಿತ್ವಕ್ಕೆ ಮಾತುಗಳಲ್ಲಿ ಸಹಜರೂಪವನ್ನು ಕೊಡುತ್ತಿಲ್ಲವೆಂದು ಹಾಗೆ ತಿಳಿಯುವುದಕ್ಕಿಂತ ಮುಂಚೆ ಆಶ್ಚರ್ಯ ಪಡುತ್ತಿದ್ದೆ. "ರಸಿಕ ರಂಜನ"ನೆಂಬ ಗುಪ್ತನಾಮದಿಂದ ಅವರು ಅನೇಕ ಕಥಾಕವಿತೆಗಳನ್ನು ಬರೆಯುತ್ತಿದ್ದರೆಂಬುದು ತಿಳಿದುಬಂದಾಗ, ನಾನು ಎಣಿಸಿದ್ದು, ನಾನು ಕಲ್ಪಿಸಿದ್ದು ಯಥಾರ್ಥವೇ ಎಂದು ಮನಗೊಳ್ಳುವಂತಾಯಿತು.

ನಮ್ಮ ಕಾಲದ ಯುವತಿಯುವಕರ ಮನೋಭಾವದಲ್ಲಿ ಯಾವ ತರದ ಅಂತಃಪ್ರವಾಹಗಳು ಹರಿಯುತ್ತಿವೆ, ಯಾವ ತರದ ಜ್ವಾಲಾಮುಖಿಗಳು ಸಿಡಿಯುತ್ತಿವೆ, ಯಾವ ತರದ ಪರಂಜ್ಯೋತಿಗಳು ಉರಿಯುತ್ತಿವೆ ಎಂಬುದು ಊಹನಾಶಕ್ತಿಯಿದ್ದು ಸಂಸಾರದ ಊನ ನ್ಯೂನಗಳನ್ನು ಮನಕಂಡ ಮನುಷ್ಯನಿಗೆ ಗೊತ್ತಿದೆ. ಅಂತಹ ಮನೋ ಭಾವದಲ್ಲಿ ಹುಟ್ಟಿ ಬೆಳೆದ ಗಿಡದಲ್ಲಿ ಆರು ಹೂಗಳು ಇವು, ಮಳೆ ಯಲ್ಲಿ ಬಳಕುತ್ತಿವೆ, ಬಿಸಿಲಲ್ಲಿ ಬಾಡುತ್ತಿವೆ, ತುಂಬಿಯಿಂದ ಪೀಡೆ

ಹೊಂದುತ್ತಿವೆ—ಮತ್ತು ಒಂದು ತರದ ರಸಜೀವನಕ್ಕೆ, ಕೃತಿಕಾವ್ಯಕ್ಕೆ ಪಡಿಯೊತ್ತುತ್ತಿವೆ. ಈ ಹೂಗಳು ನೆರೆಮನೆಯ ತೋಟದ ಹೂಗಳಂತೆ ಆಕರ್ಷಕವಾಗಿವೆ.

ನೆರೆಮನೆಯ ಹುಡುಗಿ, ನೆರೆಮನೆಯ ತೋಟದ ಹೂವಿನಂತೆ, ಎಲ್ಲರಿಗೂ ಬೇಕಾದವಳು. ಅವಳ ಸುಖದುಃಖ ಎಲ್ಲರ ಬದುಕು; ಅವಳ ಹಾವಭಾವ ಎಲ್ಲರ ಕವಿತೆ; ಅವಳ ನಡೆನುಡಿ ಎಲ್ಲರ ಕಣ್ಣು. ನೆರೆಮನೆಯ ಹುಡುಗಿಯ ಮೇಲೆ ಮುದುಕರಿಗೆ ಮಾಯೆ; ಯುವಕರಿಗೆ ಮಮತೆ. ಆಕೆ ಗಂಡಸರಿಗೆ ಕಣ್ಗೊಂಬೆ; ಹೆಂಗಸರಿಗೆ ಕೈಗೊಂಬೆ. ನೆರೆಮನೆಯ ಹುಡುಗಿಯಲ್ಲಿ ಕಾವ್ಯ ಕಾಣುವವರು ಸ್ವಯಂಕವಿಗಳು: ರಸಭಾವ ಕಾಣುವವರು ಸ್ವಯಂರಸಿಕರು.

ಶ್ರೀಮಾನ್ ಎಸ್. ಪಿ. ಭಟ್ಟರು ತಮ್ಮ ಸುತ್ತಮುತ್ತಲಿನಲ್ಲಿ ತಾವು ಕಂಡ ಕವಿತೆಯನ್ನು, ತಾವು ತಿಳಿದ ರಸವನ್ನು ತಮ್ಮ ಮಾತಿನ ಎರಕದಲ್ಲಿ ಹೊಯ್ದಿರುತ್ತಾರೆ. ಮಾತಿನ ಮೂರ್ತಿ ಎದ್ದು ನಿಂತಿದೆ: ನಿಂತ ಮಾತಿನ ಆ ಮೂರ್ತಿಗೆ ಮಂಡಳಿಯ ಪರವಾಗಿ ನನ್ನ ಹೂಮಾಲೆಯಿದು; ನನ್ನ ದೀಪಮಾಲೆಯಿದು.

**ಜೆ. ವಾಮನ ಭಟ್ಟ**

# ಬಿನ್ನಹ

ಪ್ರಪಂಚದಲ್ಲಿ ಕತೆಗಾರರಲ್ಲದವರೇ ಇಲ್ಲ; ಕತೆ ಕಟ್ಟುವ ಯಾ ಕತೆ ನೂಲುವ (yarn-spinning) ಕಲೆಯು ಎಲ್ಲರಿಗೂ ಸಹಜ ವಾಗಿರುವುದು. ಮಗುವು ತಾಯಿಯಿಂದ ತನಗೆ ಬೇಕಾದುದನ್ನು ಪಡೆಯುವುದಕ್ಕಾಗಿ ಕತೆ ನೂಲುವುದು; ಶಾಲೆಯ ಮಕ್ಕಳು ಪಾಠ ಗಳಿಂದ ತಪ್ಪಿಸಿಕೊಳ್ಳುವುದಕ್ಕಾಗಿ; ಗಂಡನು ರಾತ್ರಿ ತಡಮಾಡಿ ಮನೆಗೆ ಬಂದುದಕ್ಕಾಗಿ; ಹೆಂಡತಿಯು ತವರ್ಮನೆಗೆ ಹೋಗು ವುದಕ್ಕಾಗಿ; ಧನಿಯು ಧನ ಶೇಖರಿಸುವುದಕ್ಕಾಗಿ; ಆಳು ಆಲಸ್ಯ ದಿಂದ ಸಮಯ ಕಳೆದುದಕ್ಕಾಗಿ;—ಹೀಗೆಲ್ಲ ಎಲ್ಲರೂ ಕತೆ ನೂಲು ವುದರಲ್ಲಿ ನಿರತರೇ. ಆದರೆ ಹೀಗೆ ನೂತ ಕತೆಗಳೆಲ್ಲ, ಹೂದೋಟ ದೊಳಗಿನ ತಾತ್ಕಾಲಿಕ ಗಿಡಬಳ್ಳಿಗಳಂತೆ, ತಾತ್ಕಾಲಿಕ ಸೇವೆಯನ್ನು ಸಲ್ಲಿಸಿ ಗಾಳಿಯೊಳಗೆ ಲೀನವಾಗಿ ಹೋಗುವುವು.

ಸ್ವ-ಪರ ಮನೋರಂಜನಕ್ಕಾಗಿ ಕತೆ ಕಟ್ಟುವವರೂ ಕೆಲವರಿರು ವರು. ಅಂತಹವರು ಒಂದು ವಿಶಿಷ್ಟ ದೃಶ್ಯವನ್ನು ಕಾಣುವರು, ಒಂದು ನವೀನ ತತ್ತ್ವವನ್ನು ಭಾವಿಸುವರು, ಒಂದು ಹೃದಯದ್ರಾವಕ ಘಟನೆಯನ್ನು ಕುರಿತು ಕೇಳುವರು, ಒಂದು ಮಹಾಸಾಧನೆಯ ವಿಷಯವಾಗಿ ಓದುವರು; ಒಡನೆ ಅವರಿಗೆ ಸ್ಫುರಣವಾಗಿ ಅವರ ಮನಸ್ಸಮುದ್ರದೊಳಗೆ ಮಥನಕ್ಕೆ ಮೊದಲಾಗುವುದು. ಇದರ ಪರಿಣಾಮವಾಗಿ ಕಹಿಯಾದ ಕತೆಗಳ ವಿಷವೂ ಹರಿಯುವುದು; ಸಿಹಿಯಾದ ಕತೆಗಳ ಅಮೃತವೂ ಸುರಿಯುವುದು. ಅಂದಿನ ಆ ಅಮೃತ-ವಿಷಗಳಂತೆ ಇಂದಿನ ಈ ಅಮೃತ-ವಿಷಗಳೆರಡೂ ಸಮಾ ಜಕ್ಕೆ ಆವಶ್ಯಕವಾದುವೇ. ಇಂತಹ ಕತೆಗಳು, ಉದ್ಯಾನದೊಳಗಿನ ಚಿರಕಾಲಿಕ ಗಿಡಬಳ್ಳಿಗಳಂತೆ, ತಮ್ಮ ಸೇವೆಯನ್ನು ಸಲ್ಲಿಸುತ್ತ ಚಿರಕಾಲ ಬಾಳುವುವು.

ಭೂಗರ್ಭದೊಳಗಿನ ಝರಿಯೊಂದು ಪ್ರವಾಹವಾಗಿ ರಭಸದಿಂದ ದೂರಕ್ಕೆ ಹರಿದುಕೊಂಡು ಹೋಗುವುದು; ಅದೊಂದು ಮಹಾನದಿಯಾಗಿ ಮೆರೆಯುವುದು. ಇನ್ನೊಂದು ಝರಿಯು ನೆಲದೊಳಗೇ ಬಹಳ ಕಂತಕ್ಕೆ ಅಂತರ್ಗಾಮಿಯಾಗಿ ಹರಿದು, ಅಲ್ಲಿಂದ ಮೇಲಕ್ಕೆ ತಿರುಗಿ, ಒಂದೆಡೆ ದಾರಿ ಮಾಡಿಕೊಂಡು ಬಾಂದಳಕ್ಕೆ ಚಿಮ್ಮಿ ಹಾರುವುದು; ಅದೊಂದು ಮನೋಹರವಾದ ಕಾರಂಜಿಯಾಗಿ ರಂಜಿಸುವುದು. ಇನ್ನೊಂದು, ತಗ್ಗಿನ ನೆಲದಲ್ಲಿ ಹೊರಹೊಮ್ಮಿ, ತಗ್ಗನ್ನು ತುಂಬಿ ಅಲ್ಲಿಯೆ ನೆಲೆನಿಲ್ಲುವುದು; ಅದೊಂದು ಚೆಲುವಾದ ಕೊಳವಾಗಿ, ಕಮಲಗಳಿಂದ, ಕಲಹಂಸಗಳಿಂದ ಕೂಡಿ ವಿರಾಜಿಸುವುದು.

ಭಾವನಾಝರಿಯಾದರೂ ಹೀಗೆಯೆ: ಅದು ಮನಃಪ್ರಾಂತದಲ್ಲಿ ಒಸರಿ, ಮಹಾನದಿಯಂತೆ, ಕಾದಂಬರಿ ಯಾ ಕಾವ್ಯವಾಗಿ ಪ್ರಕಟವಾಗುವುದು; ಕಾರಂಜಿಯಂತೆ, ಕವಿತೆಯಾಗಿ ಹೊರಚಿಮ್ಮುವುದು; ಕೊಳದಂತೆ, ಸಣ್ಣಕತೆಯಾಗಿ ಹೊರಹೊಮ್ಮುವುದು.

ನೀರಝರಿಯು, ಅದರ ಬಾಯಿಯನ್ನು ಒಂದೆಡೆ ಪೂರ್ತಿಯಾಗಿ ಮುಚ್ಚಿಬಿಟ್ಟರೂ, ಯಾವಾಗಲೊಮ್ಮೆ ಬೇರೊಂದು ಕಡೆಯಲ್ಲಿ ದಾರಿ ಕೊರೆದುಕೊಂಡು ಯಾವುದೊಂದು ರೂಪದಲ್ಲಿ ಹೊರಬರದೆ ಬಿಡದಷ್ಟೆ. ಅದರಂತೆಯೆ ಭಾವನಾಝರಿಯಾದರೂ, ಒಮ್ಮೆ ತಡೆಗಟ್ಟಿದರೂ, ಯಾವಾಗಲೊಮ್ಮೆ ಯಾವುದೊಂದು ರೂಪದಲ್ಲಿ ಹೊರಹೊಮ್ಮದೆ ಇರದು. ಇದಕ್ಕೆ ನನ್ನ ಮಟ್ಟಿಗೆ ನನ್ನ ಕತೆಗಳೇ ಸಾಕ್ಷ್ಯ.

ಯೌವನದ ಹೊಂಬಿಸಿಲಲ್ಲಿ ಮಾನವನು ಎಷ್ಟೋ ಹಗಲು-ಗನಸುಗಳನ್ನು ಕಾಣುವನು; ಎಷ್ಟೋ ಗಾಳಿಗೋಪುರಗಳನ್ನು ಕಟ್ಟುವನು. ಅಂತಹವುಗಳಲ್ಲಿ ಎಷ್ಟೋ ಕನಸುಗಳು ಪ್ರಣಯದ ಸಣ್ಣಕತೆಗಳಾಗಲು ಅರ್ಹತೆ ಪಡೆದಿರುವುವು; ಎಷ್ಟೋ ಗಾಳಿಗೋಪುರಗಳು ಅವುಗಳ ಬರೆವಣಿಗೆಯಲ್ಲಿ ಉಪಯುಕ್ತವಾಗಿರುವುವು. ಇದು ಈ ಕತೆಗಳ ಸಂಬಂಧವಾಗಿ ನನ್ನ ಸ್ವಂತ ಅನುಭವದ ಮಾತು.

ವಿಶ್ವಸಾಹಿತ್ಯದೊಳಗೆ ಸಣ್ಣಕತೆಯು ವಿಶ್ವರೂಪಿಯಾಗಿರುವುದು, ವಿಶ್ವವ್ಯಾಪಿಯಾಗಿರುವುದು; ಕಾಮನಬಿಲ್ಲಿನಂತೆ ಬಹುವರ್ಣಗಳಿಂದ ರಂಜಿಸುತ್ತಿರುವುದು; ಪುಷ್ಪರಾಜಿಯಂತೆ ವಿವಿಧ ವರ್ಣ-ಆಕಾರ-ಸುವಾಸನೆಗಳಿಂದ ವಿರಾಜಿಸುತ್ತಿರುವುದು; ನವರತ್ನಗಳಂತೆ ನಾನಾ ತರದ ಪ್ರಕಾಶಗಳಿಂದ ಮಿರುಗಿ ಮೆರೆಯುತ್ತಿರುವುದು. ಭಕ್ಷ್ಯಭೋಜ್ಯಗಳಂತೆ ಅನೇಕಾನೇಕ ರಸ-ರುಚಿಗಳಿಂದ ವಿಜೃಂಭಿಸುತ್ತಿರುವುದು.

ಜೀವನದೊಳಗಿನ ನೀರಸತೆಯ ಕಡಲನ್ನು ದಾಂಟಿ ಉಲ್ಲಾಸದ ದ್ವೀಪಕ್ಕೆ ಸಾಗಲು ಕಟ್ಟಿದ ಸಂಕದಂತೆ ಈ ಸಣ್ಣಕತೆಗಳಿರವು. ನನ್ನ ಈ ಕತೆಗಳು ಈ ಸಂಕದ ಹೆಗ್ಗಲ್ಲುಗಳ ನಡುವೆ ಅಳಿಲು ಒದಗಿಸಿದ ಮಳಲ ಕಣಗಳಾಗಿರಲೆಂಬುದೇ ನನ್ನ ಬಯಕೆ.

ಕತೆಗೂಸುಗಳಿಗೆ ಹೆಚ್ಚಾಗಿ ಪತ್ರಿಕೆಗಳೇ ತೊಟ್ಟಿಲುಗಳು. ಅಂತೆಯೆ ಈ ಸಂಗ್ರಹದೊಳಗಿನ 'ಒಲುಮೆಯ ಚಿಲುಮೆ'ಗೆ 'ಉದಯಭಾರತ'ವೂ, 'ವಿಲುಪ್ತ ವಸ್ತು'ವಿಗೆ 'ದೇಶರಂಜನ'ವೂ, ಉಳಿದವುಗಳಿಗೆ 'ಸ್ವದೇಶಾಭಿಮಾನಿ'ಯೂ ತೊಟ್ಟಿಲುಗಳಾದುವು. ಇವೆಲ್ಲ ನನ್ನ ಸ್ವತಂತ್ರ ಕತೆಗಳೇ ಆದರೂ, 'ಮಾರ್ಗ ತಪ್ಪಿ ಸ್ವರ್ಗ'ದ (Idea) ಭಾವನೆಗೆ ನಾನು ಓ. ಹೆನ್ರಿಗೆ ಋಣಿಯಾಗಿರುವೆನು; 'ನೆರೆಮನೆಯ ಹುಡುಗಿ,' 'ಪ್ರಣಯದಲ್ಲಿ ಪ್ರಳಯ' ಮತ್ತು 'ಅಮೃತದಲ್ಲಿ ವಿಷ'—ಇವು 'ಆಂಧ್ರ ಪತ್ರಿಕೆ'ಯೊಳಗಿನ ಕತೆಗಳಲ್ಲಿನ ಬೇರೆ ಬೇರೆ ಚಿತ್ರಗಳಿಂದ ಪ್ರೇರಿತವಾದವುಗಳು. ಇಲ್ಲಿ ಅವೇ ದೃಶ್ಯಗಳ ಹೊಸ ಚಿತ್ರಗಳನ್ನು ಆಯಾ ಕತೆಯೊಂದಿಗೆ ಹೊಂದಿಸಲಾಗಿದೆ.

ಈ ಕತೆಗಳೆಲ್ಲವೂ ಇಲ್ಲಿ, ಆಧುನಿಕ ಅಭಿರುಚಿಗೆ ತಕ್ಕಂತೆ, ಶೈಲಿಯಲ್ಲಿ ಕೆಲವೊಂದು ಸಂಸ್ಕಾರಗಳನ್ನು ಹೊಂದಿರುವುವು. 'ಒಲುಮಯ ಚಿಲುಮೆ'ಯು ಕೆಲವೊಂದು ಸನ್ನಿವೇಶಗಳ

ಸೂಪರ್ಾಟನ್ನೂ ಪಟ್ಟಿರುವುದು. 'ವಿಲುಪ್ತ ವಸ್ತು'ವೊಂದನ್ನುಳಿದು ಮಿಕ್ಕೆಲ್ಲವೂ ಪುನರ್ನಾಮಕರಣಕ್ಕೆ ಗುರಿಯಾಗಿರುವುವು.

ಈ ಕತೆಗಳೊಳಗಿನ ಕೆಲವು ಶಬ್ದಪ್ರಯೋಗಗಳು ಕೆಲವರಿಗೆ ಒಪ್ಪದಿರಬಹುದು; ಕೆಲವು ಚಿಹ್ನೆಗಳು ಕೆಲವರಿಗೆ ಅನಾವಶ್ಯಕ ವೆಂದು ತೋರಬಹುದು; ಕೆಲವು ವಚನಗಳು ಆಂಗ್ಲ ಭಾಷಾಸರಣಿ ಯಿಂದ ಅಂಗೀಕೃತವಾದುದರಿಂದ ವಿಲಕ್ಷಣವೆಂದು ಕಾಣಬಹುದು. ಆದರೆ ಆಧುನಿಕ ಜನಜೀವನದಲ್ಲಿ ಬಳಕೆಯಲ್ಲಿರುವುವೆಂದು ಅಂತಹ ಶಬ್ದಗಳನ್ನು ಪ್ರಯೋಗಿಸಿರುವೆನು. ಓದಲು, ಉಚ್ಚರಿಸಲು, ಹೆಚ್ಚಿನ ಸೌಲಭ್ಯ ದೊರೆಯುವುದೆಂದು ಅಂತಹ ಚಿಹ್ನೆಗಳನ್ನು ಉಪಯೋಗಿ ಸಿರುವೆನು. ಶರೀರಾಲಂಕಾರಕ್ಕೆಂದು ಪರದೇಶೀಯ ಸೌಂದರ್ಯೋಪ ಕರಣಗಳನ್ನು ನಾವು ಬಳಸುತ್ತಿರುವಂತೆಯೆ ಭಾಷಾಲಂಕಾರಕ್ಕೆಂದು ಅಂತಹ ವಚನಗಳನ್ನು ಆಯ್ದುಕೊಂಡಿರುವೆನು. ಆಕ್ಷೇಪಿಸುವವರು ದಯೆಮಾಡಿ ಕ್ಷಮಿಸಲಿ.

ಈ ಕತೆಗಳನ್ನು ಪ್ರಕಟಿಸುವುದರಲ್ಲಿ ನನಗೆ ನೆರವಾದವ ರಲ್ಲಿ ಎಲ್ಲ ರೀತಿಯಿಂದಲೂ ನನಗೆ ಹಿರಿಯರಾಗಿರುವ ಶ್ರೀಮಾನ್ ಗೋವಿಂದ ಪೈಗಳೇ ಮೊದಲಾಗಿ ವಂದನಾರ್ಹರು. ಅವರು ಕಿರಿ ಯನಾದ ನನ್ನ ಬಿನ್ನಹವನ್ನು ಹಿರಿಯ ಮನಸ್ಸಿನಿಂದ ಮನ್ನಣೆ ಮಾಡಿ, ತಮ್ಮ ಪಾಂಡಿತ್ಯಪೂರ್ಣವೂ ಮನೋಹರವೂ ಆದ ಮುನ್ನುಡಿಯನ್ನು ಅಕ್ಕರೆಯಿಂದ ದಯೆಪಾಲಿಸಿ ಹರಸಿದುದರ ಸಲು ವಾಗಿ ಅವರಿಗೆ ನಾನು ಚಿರಕೃತಜ್ಞನು.

ಈ ಕತೆಗಳ ವಿಷಯದಲ್ಲಿ ಬಹು ಪ್ರಯೋಜನಕಾರಿಗಳಾದ ಅನೇಕ ಸಲಹೆ-ಸೂಚನೆಗಳನ್ನು ಕೊಟ್ಟು, ಇವು ಅಚ್ಚಾಗುವ ವರೆಗೆ ನನಗೆ ಎಲ್ಲ ವಿಧದಿಂದಲೂ ಸಹಾಯಕರಾದ ನನ್ನ ಆಪ್ತ ಮಿತ್ರರು ಗಳಾದ ಡೊಕ್ಟರ್ ಕೆ. ಪ್ರಭಾಕರ ರಾವ್, ಎಮ್. ಬಿ., ಬಿ. ಎಸ್., ಮತ್ತು ಶ್ರೀಮಾನ್ ಜೆ. ವಾಮನ ಭಟ್ಟ, ಬಿ. ಎ., ಎಲ್. ಟಿ., ಇವರ ಉಪಕಾರವು ಚಿರಸ್ಮರಣೀಯವೇ ಸರಿ.

ಈ ಪುಸ್ತಕದ ಒಳಗಿನ ಹಾಗೂ ಹೊರಗಿನ ಚಿತ್ರಗಳನ್ನು ಅತ್ಯಲ್ಪ ಕಾಲದಲ್ಲಿ ಚಲೋದಾಗಿ ಚಿತ್ರಿಸಿಕೊಟ್ಟ ಮಿ. ಜೆ. ಕೆ. ಆರ್ಥರ್, ಮಂಗಳೂರು, ಇವರಿಗೆ ನನ್ನ ಹೃತ್ಪೂರ್ವಕ ವಂದನೆಗಳು ಸಲ್ಲಬೇಕಾಗಿವೆ. ಚಿತ್ರಲೇಖನದಲ್ಲಿ ಒಳ್ಳೆಯ ಪ್ರತಿಭಾಶಾಲಿಗಳಾಗಿರುವ ಈ ತರುಣ ಚಿತ್ರಗಾರರು ಶ್ಲಾಘಾರ್ಹರೂ ಪ್ರೋತ್ಸಾಹ-ಯೋಗ್ಯರೂ ಆಗಿರುವರೆಂದು ಈ ಚಿತ್ರಗಳಷ್ಟರಿಂದಲೇ ವ್ಯಕ್ತವಾಗದಿರದು. ಎಲ್ಲ ಸಾಹಿತಿಗಳೂ ಇವರ ಕಲಾಕೌಶಲ್ಯದ ಪ್ರಯೋಜನವನ್ನು ಹೊಂದಿ, ಇವರ ಕಲೆಯನ್ನು ಉತ್ತರೋತ್ತರ ಅಭಿವೃದ್ಧಿಗೆ ತಂದು, ಕರ್ಣಾಟಕಕ್ಕೆ ಕೀರ್ತಿ ತರುವರೆಂದು ಹಾರೈಸುತ್ತೇನೆ.

ಸಂಬಂಧಪಟ್ಟ ಕತೆಗಳನ್ನು ತಮ್ಮ ಪತ್ರಿಕೆಗಳಿಂದ ಪುನರ್ಮುದ್ರಿಸಲು ಅನುಮತಿಯಿತ್ತ 'ಸ್ವದೇಶಾಭಿಮಾನಿ'-'ದೇಶರಂಜನ'ಗಳ ಸಂಪಾದಕರುಗಳಿಗೆ ನಾನು ಚಿರಋಣಿಯೆಂದೆ.

ಈ ಪುಸ್ತಕವನ್ನು ಕ್ಲುಪ್ತ ಕಾಲದಲ್ಲಿ ಸುಂದರವಾಗಿ ಮುದ್ರಿಸಿ ಕೊಟ್ಟ ಶ್ರೀಮಾನ್ ಯು. ಗಣೇಶ ಶೆಣೈ, ಸರಸ್ವತೀ ಪ್ರಿಂಟಿಂಗ್ ವರ್ಕ್ಸ್, ಲಿಮಿಟೆಡ್, ಇವರಿಗೂ, ಚಿತ್ರಗಳ ಪಡಿಯಚ್ಚುಗಳನ್ನು ತಯಾರಿಸಿ ಸಕಾಲದಲ್ಲಿ ಮನೋರಂಜಕವಾಗಿ ಮುದ್ರಿಸಿಕೊಟ್ಟ ಶಾರದಾ ಛಾಪಖಾನೆಯ ಶ್ರೀಯುತ ಕಾಮತ್ ಬಂಧುಗಳಿಗೂ ನನ್ನ ಕೃತಜ್ಞತೆಯನ್ನು ಈ ಮೂಲಕ ಸಮರ್ಪಿಸುವೆನು.

ಈ ಪುಟ್ಟ ಸಂಗ್ರಹವನ್ನು ತಮ್ಮ ಗ್ರಂಥಮಾಲೆಯಲ್ಲಿ ಪೋಣಿಸಿಕೊಳ್ಳಲು ಸಮ್ಮತಿಸಿದ ಮಿತ್ರಮಂಡಳಿಗೆ ನಾನು ಸದಾ ಆಭಾರಿ.

ಮಂಗಳೂರು
15—6—1941

ಎಸ್. ಪಿ. ಭಟ್ಟ

# ಅನುಕ್ರಮಣಿಕೆ


೧. ನೆರೆಮನೆಯ ಹುಡುಗಿ . . . . . ೧

೨. ಒಲುಮೆಯ ಚೆಲುಮೆ . . . . . ೧೯

೩. 'ವಿಲುಪ್ತ ವಸ್ತು' . . . . . ೩೯

೪. ಮಾರ್ಗ ತಪ್ಪಿ ಸ್ವರ್ಗ . . . . . ೫೧

೫. ಪ್ರಣಯದಲ್ಲಿ ಪ್ರಳಯ . . . . . ೬೫

೬. ಅಮೃತದಲ್ಲಿ ವಿಷ . . . . . ೮೧


## ಚಿತ್ರಗಳು :


ಮುಂದಿನ ಪುಟ:

೧. 'ವಿಲುಪ್ತ ವಸ್ತು' . . . . . i

೨. ನಾನು ರೋಹಿಣಿಗೆ ಹೊರಲಾರದಷ್ಟು ಹೂಗಳನ್ನು ಕಿತ್ತುಕೊಟ್ಟೆನು . . . ೧

೩. ಮೋಹಿನಿಯು ಸಂಗೀತದಲ್ಲಿ ತಲ್ಲೀನಳಾಗಿ ಹೋದಳು . ೬೫

೪. ಅನಂತನಿಗೆ ಶಾಂತೆಯ ದೇಹಲತೆಯ ದಿಗ್ಸ್ಪರ್ಶನವು ಒಂದು ಕ್ಷಣ ಮಾತ್ರ ದೊರೆಯಿತು . ೮೧



ನಾನು ರೋಹಿಣಿಗೆ ಹೊರಲಾರದಷ್ಟು ಹೂವನ್ನು ಕಿತ್ತುಕೊಟ್ಟೆನು.

# ನೆರೆಮನೆಯ ಹುಡುಗಿ

ಹೂಗಳೆಂದರೆ ನನಗೆ ಪ್ರಾಣ; ರೋಹಿಣಿಗೂ ಹಾಗೆಯೆ. ಅವಳೇ ಒಂದು ಹೂವು. ಹೂವೆಂದರೆ, ಸಾಮಾನ್ಯ ಹೂವಲ್ಲ; ಹೂವಿನ ರಾಣಿಯೆ. ಆದುದರಿಂದಲೇ ಎಲ್ಲ ಹೂಗಳಿಗಿಂತಲೂ ರೋಹಿಣಿಯೆಂದರೆ ನನಗೆ ಪಂಚಪ್ರಾಣ.

ರೋಹಿಣಿಯಂತಹ ಚೆಲುವೆ ಸಾವಿರದಲ್ಲಿ ಒಬ್ಬಳಿರುವುದು ಅನುಮಾನ. ಅವಳು ಮಾತಾಡುವಾಗ ಹಾಡುವಂತೆ ತೋರುವುದು; ಅವಳು ಹಾಡುವಾಗ ಕೋಗಿಲೆಯೂ ನಾಚುವುದು; ಅವಳು ಅಳುಕಿ ಬಳುಕಿ ನಡೆಯುವಾಗ ಕುಣಿಯುವಂತೆ ಎನಿಸುವುದು; ಅವಳು ಸಂತೋಷದಿಂದ ನಲಿಯುವಾಗ ನವಿಲೂ ಅಸೂಯೆ ಪಡುವುದು. ಅವಳು ನಗುವಾಗ ಮುತ್ತು ಚೆಲ್ಲುವುದು; ಅಳುವಾಗ ಮಾಣಿಕ್ಯ ಉದುರುವುದು. ನನಗಂತೂ ರೋಹಿಣಿಯು ನಕ್ಕರೆ ಅದೇ ಹಗಲು,—ದಿವ್ಯ ಪ್ರಕಾಶಮಾನವಾದ ದಿವಸ; ಅವಳು ಅತ್ತರೆ, ಆಗಲೇ ಇರುಳು,—ಗಾಢಾಂಧಕಾರಮಯವಾದ ಕಾಳರಾತ್ರಿ.

*   *   *   *

ಅದಾಗಲೇ ನಾನು ಬೇಸಿಗೆಯ ರಜೆಯಲ್ಲಿ ಮನೆಗೆ ಬಂದಿದ್ದೆನು. ವಿದ್ಯಾಭ್ಯಾಸಕ್ಕಾಗಿ ಮಂಗಳೂರಿಗೆ ಹೋದವನು, ನೀರಿನಿಂದ ಈಚೆಗೆ ಎತ್ತಿದ ಮೀನು ನೀರನ್ನು ಆಶಿಸುವಂತೆ, ಒಂದು ವರ್ಷದಿಂದಲೂ ಊರನ್ನು ಬಯಸಿ ಬಯಸಿ ಬೆಂಡಾಗಿದ್ದೆನು. ನನ್ನ ಮನೆಯನ್ನೂ ಮನೆಮುಂದಿಯನ್ನೂ ನೋಡಿ ದೊರೆತ ಸಂತೋಷವು ನನ್ನ ಪ್ರಯಾಣದ ಆಯಾಸವನ್ನು ಕೊಚ್ಚಿಕೊಂಡು ಹೋಗಿತ್ತು. ಹಿಂದಿನ ದಿನ ಮನೆಗೆ ಬಂದು ಮುಟ್ಟುವಾಗ ರಾತ್ರಿ

ಆಗಿಹೋಗಿದ್ದುದರಿಂದ ಹೊರಗಿನ ಯಾರನ್ನೂ ಯಾವುದನ್ನೂ ನೋಡಲು ಅನುವಾಗಿರಲಿಲ್ಲ. ಹಾಗಾಗಿ, ಆ ದಿನ ಬೆಳಗಾಗುತ್ತಲೇ ಎದ್ದು, ಮುಖತೊಳೆದು, ಲಗುಬಗೆಯಿಂದ ನಮ್ಮ ಮನೆಯ ಸುತ್ತಲಿನ ತೋಟಕ್ಕೆ ಹೋದೆನು.

ತೋಟದೊಳಗಿನ ಸಂಪಿಗೆ, ನಾಗಸಂಪಿಗೆ, ಪಾರಿಜಾತ, ಅಶೋಕ ಮುಂತಾದ ಹೂವಿನ ಮರಗಳೂ, ಪೇರಳೆ, ನೇರಳೆ, ಸೀತಾಫಲ, ಮಾವು, ಹಲಸು ಮುಂತಾದ ಹಣ್ಣಿನ ಮರಗಳೂ, ಸ್ವಲ್ಪವೂ ಮಾರ್ಪಾಟಿಲ್ಲದೆ, ನಾನು ಹೊರಟು ಹೋಗುವಾಗ ಇದ್ದಂತೆಯೇ ಇದ್ದುವು. ಕೆಲವು ಹೂವಿನ ಮರಗಳ ಮೇಲೆ ಹೂಗಳು ಅರಳಿ ಘಮಘಮಿಸುತಿದ್ದುವು. ಕೆಲವು ಹಣ್ಣಿನ ಮರಗಳ ಮೇಲೆ ಕಾಯಿಗಳು ಕಿಕ್ಕಿರಿದು ತುಂಬಿ ಮನಸ್ಸನ್ನು ಸೆಳೆಯುತಿದ್ದುವು. ನಾನು ಚಿಕ್ಕಂದಿನಿಂದಲೂ ನೆಟ್ಟು, ನೀರೆರೆದು, ಜಾಗರೂಕತೆಯಿಂದ ಬೆಳೆಯಿಸಿದ್ದ ಹೂವಿನ ಗಿಡಬಳ್ಳಿಗಳಲ್ಲಿ ಹೆಚ್ಚಿನವು ಕೊರಗಿ, ಸೊರಗಿ, ಇಂದೋ ನಾಳೆಯೋ ಎನ್ನುವಂತೆ, ಅವಸಾನಕಾಲವನ್ನು ಎದುರು ನೋಡುತ್ತ ಇದ್ದುವು. ಇನ್ನೂ ಕೆಲವು ದೇವರು ಕೊಟ್ಟ ಆಹಾರವಷ್ಟರಿಂದಲೇ ತೃಪ್ತಿಹೊಂದಿ, ಹೂಬಿಟ್ಟು, ಅಂದವಾಗಿ ಮೆರೆಯುತಿದ್ದುವು.

ನನ್ನ ಅಚ್ಚುಮೆಚ್ಚಿನ ಗಿಡಬಳ್ಳಿಗಳ ನಿಕೃಷ್ಟ ಅವಸ್ಥೆಯನ್ನು ಕಂಡು ನನಗೆ ಬಹಳ ಕನಿಕರವಾಯಿತು. ಒಡನೆಯೇ, ಅವುಗಳ ಆರೈಕೆಯನ್ನು ರಜೆಯಲ್ಲೆಲ್ಲ ಎಡೆಬಿಡದೆ ಮಾಡಬೇಕೆಂದು, ಅವು ಗಟ್ಟಿಮುಟ್ಟಾದುದನ್ನು, ಧೃಷ್ಟಪುಷ್ಟವಾದುದನ್ನು, ಕಣ್ಣಾರೆ ಕಂಡು ಆನಂದಿಸಬೇಕೆಂದು ನಿಶ್ಚಯಮಾಡಿಕೊಂಡೆನು.

ಎರಡು ಘಂಟೆಗಳ ವರೆಗೆ ತೋಟದಲ್ಲಿ ಹುಚ್ಚನಂತೆ ಅಲೆದಾಡಿದೆನು. ಗಿಡಬಳ್ಳಿಗಳ ಮೇಲೆ ಅರಳಿದ ಹೂಗಳನ್ನು ಸವರಿ, ಮೂಸಿ, ಮುದ್ದಿಸಿ ನಲಿದಾಡಿದೆನು. ಮರಗಳ ಮೇಲಿಂದ ಪೇರಳೆ ಹಣ್ಣುಗಳನ್ನೂ ಮಾವಿನ ಮಿಡಿಗಳನ್ನೂ ಉದುರಿಸಿ, ತಿಂದು ಕುಣಿದಾಡಿದೆನು.

* * * *

ಅಷ್ಟರಲ್ಲಿ ನನ್ನ ದೃಷ್ಟಿಯು ನಮ್ಮ ತೋಟದ ಪಡುವಲ ಗೋಡೆಯ ಬಳಿಗೆ ಅಕಸ್ಮಾತ್ತಾಗಿ ಹೋಯಿತು. ಆಗ ಕಂಡ ದೃಶ್ಯವು ಈಗಲೂ ನನ್ನ ಮನಸ್ಸಿನ ಪಟದ ಮೇಲೆ ಅಚ್ಚಳಿಯದೆ ನಿಂತಿರುವುದು: ಅಲ್ಲಿ ಗೋಡೆಯ ಅಂಚಿನ ಮೇಲೆ, ಸುಮಾರು ಹತ್ತು ವರ್ಷ ಪ್ರಾಯದ ಹುಡುಗಿಯೊಬ್ಬಳು ಕುಳಿತಿದ್ದಳು. ಕೈಯಲ್ಲಿ ತುಂಬ ಹೂಗಳನ್ನು ಹಿಡಿದುಕೊಂಡಿದ್ದಳು. ಸೂರ್ಯನ ಮುಂಜಾನೆಯ ಹೊಂಬಿಸಿಲು ಅವಳ ಮುಖವನ್ನು ಪೂರ್ತಿಯಾಗಿ ಬೆಳಗಿಸಿ ಅದರ ಅಪ್ರತಿಮ ಸೌಂದರ್ಯವನ್ನು ಪ್ರದರ್ಶಿಸುತಿತ್ತು. ಚೆದರಿದ ಮುಂಗುರುಳುಗಳ ನಡುವಿನಿಂದ ಅವಳ ಚಂಚಲವಾದ ಕಣ್ಣುಗಳು ನನ್ನನ್ನೇ ದಿಟ್ಟಿಸುತಿದ್ದುವು, ಒಂದು ವಿಚಿತ್ರ ಪ್ರಾಣಿಯನ್ನು ದಿಟ್ಟಿಸುವಂತೆ. ಅವಳನ್ನು ನೋಡುತ್ತಲೇ ನಾನು ಕೈಯೊಳಗಿನ ಅರೆತಿಂದ ಮಾವಿನ ಮಿಡಿಯನ್ನು ಕೆಳಕ್ಕೆ ಉರುಳಿಸಿ ಸ್ತಬ್ಧನಾದೆನು; ಕಣ್ಣುಗಳನ್ನು ಅಗಲವಾಗಿ ಅರಳಿಸಿ, ಮೂಕನಂತೆ ಅವಳನ್ನೇ ದಿಟ್ಟಿಸತೊಡಗಿದೆನು.

ನೆರೆಮನೆಯು ರಾಮರಾಯರದು. ಅವರಲ್ಲಿ ಈ ವಿಚಿತ್ರ ಸೊಬಗಿನ ಹುಡುಗಿಯು ಎಲ್ಲಿಂದ ಬಂದಳೆಂದು ನನಗೆ ಆಶ್ಚರ್ಯವಾಯಿತು. ಅವಳನ್ನು ಮಾತಾಡಿಸಿ, ಎಲ್ಲವನ್ನೂ ತಿಳಿಯಬೇಕೆಂಬ ಕುತೂಹಲವುಂಟಾಯಿತು. ಆದರೆ ಹೇಗೆ ಮಾತಾಡಿಸಲಿ? ಒಡನೆ ಅವಳ ಕೈಯೊಳಗಿನ ಹೂಗಳನ್ನು ಕಾಣುತ್ತಲೇ ನನಗೆ ಸ್ಫುರಣವಾಯಿತು. ನಾನು ಮೆಲ್ಲಮೆಲ್ಲನೆ ಅವಳ ಬಳಿಗೆ ಸರಿದೆನು.

"ನಿನಗೆ ಹೂಗಳೆಂದರೆ ಇಷ್ಟವೇ?" ಅವಳ ಕೈಯಲ್ಲಿನ ಹೂಗಳ ಕಡೆಗೆ ಬೆರಳು ತೋರಿಸುತ್ತ ಕೇಳಿದೆನು.

ಅವಳು ಮಾತಾಡಲಿಲ್ಲ; ಆದರೆ, ಕೈಯೊಳಗಿನ ಹೂಗಳನ್ನು ನೋಡುತ್ತ ತಲೆಯನ್ನು ಅಲ್ಲಾಡಿಸಿ, ಹೌದೆಂದು ಸನ್ನೆ ಮಾಡಿದಳು.

"ನಿನಗೆ ಇನ್ನೂ ಬೇಕೇ?" ನಾನು ಧೈರ್ಯಗೊಂಡು ಕೇಳಿದೆನು.

ಅವಳ ಮುಖವು ಬೆಳಗಿತು; ತುಟಿಗಳು ಅರಳಿದುವು.

“ಕೊಡುತ್ತೀಯಾ?” ಎಂದು ನಸುನಗುತ್ತ ಕೇಳಿದಳು.

“ಬೇಕಾದರೆ ಕೊಡುತ್ತೇನೆ. ಬೇಕಾದಷ್ಟು ಕೊಡುತ್ತೇನೆ. ಇಗೋ, ನಾನೇ ನೆಟ್ಟ ಎಷ್ಟೋ ಗಿಡಬಳ್ಳಿಗಳಲ್ಲಿ ಎಷ್ಟೋ ಚಂದ ವಾದ ಹೂಗಳು ಅರಳಿವೆ! ಅಲ್ಲದೆ, ನೋಡು, ಆ ಮರಗಳ ಮೇಲೂ ಸಾಕಷ್ಟು ಹೂಗಳಿವೆ!” ಗಿಡ, ಬಳ್ಳಿ, ಮರಗಳ ಕಡೆಗೆ ಕೈ ತೋರಿಸುತ್ತ ಎಂದೆನು.

“ಹೂಗಳು ಬೇಡವಾದವರೂ ಇದ್ದಾರೆಯೋ?” ಎನ್ನುತ್ತ, ಅವಳು ಗೋಡೆಯಿಂದ ಕೆಳಕ್ಕೆ ಹಾರಿ, ಬಹಳ ಸರಳತೆಯಿಂದ ನನ್ನ ಕೈಯನ್ನು ಹಿಡಿದು, ಅವುಗಳ ಕಡೆಗೆ ನನ್ನನ್ನು ಎಳೆದೊಯ್ಯತೊಡಗಿ ದಳು.

“ನನಗೆ ಹೂಗಳೆಂದರೆ ತಿಂಡಿಗಿಂತಲೂ ಹೆಚ್ಚು; ಅದಕ್ಕಾಗಿಯೆ ನಾನು ಇಲ್ಲಿ ಬಂದ ಮೇಲೆ ಒಂದು ಚಿಕ್ಕ ಹೂದೋಟವನ್ನು ಮಾಡಿ ದ್ದೇನೆ. ಇಗೋ, ಇವು ನನ್ನ ಗಿಡಗಳ ಮೇಲೆಯೆ ಅರಳಿದುವು!” ಅವಳು ತನ್ನ ಕೈಯೊಳಗಿನ ಹೂಗಳನ್ನು ಹೆಗ್ಗಳಿಕೆಯಿಂದ ಎತ್ತಿ ಹಿಡಿದು ತೋರಿಸಿದಳು.

ನಾನು ಅವಳು ಕೇಳಿದ ಹೂಗಳನ್ನೆಲ್ಲ ಕೊಯ್ದು ಅವಳಿಗೆ ಕೊಡತೊಡಗಿದೆನು.

“ಈ ಗಿಡಗಳನ್ನೆಲ್ಲ ನೀನೇ ನೆಟ್ಟುದೋ?” ಗಿಡಗಳನ್ನು ತೋರಿ ಸುತ್ತ ಅವಳು ಕೇಳಿದಳು.

“ಹೌದು. ಆದರೆ ನಾನು ಮಂಗಳೂರಿಗೆ ಹೋದಂದಿನಿಂದ ಅವುಗಳನ್ನು ಯಾರೂ ಸರಿಯಾಗಿ ನೋಡಿಲ್ಲ. ಆದುದರಿಂದ ಅವೆಲ್ಲ ಇಷ್ಟು ಸೊರಗಿಕೊಂಡಿವೆ,” ನಾನು ಪಶ್ಚಾತ್ತಾಪದೊಂದಿಗೆ ಎಂದೆನು.

"ಹಾಗಾದರೆ ನೀನೇ ಮಾಸುವ್ರೋ?" ಆಶ್ಚರ್ಯದಿಂದ ಕಣ್ಣು ಅರಳಿಸುತ್ತ ಅವಳು ಕೇಳಿದಳು.

"ಹೌದು. ನಿನಗೆ ಹೇಗೆ ತಿಳಿಯಿತು?" ನಾನು ಕುತೂಹಲ ದಿಂದ ಕೇಳಿದೆನು.

"ನಿನ್ನ ಅಕ್ಕ ಸುಶೀಲೆ ನನಗೆ ಎಲ್ಲವನ್ನೂ ಹೇಳಿರುವಳು, ನಾನು ಯಾವಾಗಲೂ ಇಲ್ಲಿ ಬರುತಿದ್ದೇನೆ. ಅವಳೊಂದಿಗೆ ಬೇಕಾ ದಷ್ಟು ಹೂ ಕೊಯ್ದುಕೊಂಡು ಹೋಗುತಿದ್ದೇನೆ. ಈಹೊತ್ತೂ ಅದಕ್ಕಾಗಿಯೆ ಗೋಡೆ ಹಾರುತಿದ್ದೆ; ಅಷ್ಟರಲ್ಲಿಯೆ ನಿನ್ನನ್ನು ಕಂಡೆ. ನಿನ್ನೆ ರಾತ್ರಿ ಬಂದಿಯಾ? ಎಂತಹ ಸುಶೀಲೆ! ನನಗೆ ಹೇಳಲೇ ಇಲ್ಲ, ನೋಡು!" ಅವಳು ಸಲಿಗೆಯಿಂದ ನನ್ನನ್ನು ತಬ್ಬಿಬ್ಬಾಗಿ ಮಾಡಿದಳು.

"ಹೌದು, ನಾನು ನಿನ್ನೆ ರಾತ್ರಿಯೆ ಬಂದೆ. ಆದರೆ ನಾನು ಬರುವುದು ಸುಶೀಲೆಗೆ ಗೊತ್ತಿರಲು ಕಾರಣವಿಲ್ಲ. ನನಗೆ ರಜೆಯು ಸ್ವಲ್ಪ ಬೇಗನೆ ದೊರಕಿದುದರಿಂದ ನಾನು ಬರುವ ಸಂಗತಿಯನ್ನು ಮನೆಗೆ ತಿಳಿಸಲು ಸಮಯ ಸಿಕ್ಕಲಿಲ್ಲ," ನಾನು ವಿವರಿಸಿದೆನು.

"ನೀನು ಬಲು ತುಂಟನೆಂದು ಸುಶೀಲೆ ಹೇಳಿದ್ದಳು. ಅವಳ ಮಾತು ಸರಿಯಾಯಿತು! ಇಲ್ಲವಾದರೆ ಹೀಗೆ ಎಲ್ಲರಿಗೂ 'ಚಕ್ಕರ್' ಕೊಡುತಿದ್ದಿಯಾ?" ಅವಳು ನಗುತ್ತ ಹೇಳಿದಳು.

"ಆದರೆ ನಿನ್ನ ಮಾತಿನಿಂದ ನೀನು ನನಗಿಂತಲೂ ತುಂಟಿ ಎಂದು ತೋರುತ್ತದೆ. ನಿನ್ನ ಹೆಸರೇನು?" ನಾನು ಸಹಜವಾಗಿ ಕೇಳಿದೆನು.

"ತುಂಟರ ರಾಣಿ," ನಗುತ್ತ ಅವಳೆಂದಳು.

"ಅದಕ್ಕಿಂತಲೂ 'ಹೂವಿನ ರಾಣಿ' ಎಂಬುದೇ ನಿನಗೆ ಚೆನ್ನಾಗಿ ಒಪ್ಪುತ್ತದೆ. ನನ್ನ ತೋಟವೊಳಗಿನ ಎಲ್ಲ ಹೂಗಳಿಗೂ ಈಹೊತ್ತಿ ನಿಂದ ನೀನೇ ರಾಣಿ! ನೀನು ತೆಗೆದು ಉಳಿದುದೇ ಇತರರಿಗೆ.

ನಿನ್ನಿಂದ ತೆಗೆಯಲಾಗದುದನ್ನು ನಾನೇ ತೆಗೆದು ಕೊಡುತ್ತೇನೆ. ನಿನ್ನನ್ನು 'ಹೂವಿನ ರಾಣಿ' ಎಂದೇ ಕರೆಯಲೇ?" ನಾನು ಕೇಳಿದೆನು.

ಅವಳು ನನ್ನನ್ನೇ ಮೇಲೆ ಕೆಳಗೆ ನೋಡಿದಳು. ಕಡೆಗೆ, "ಬೇಡ, ನನ್ನನ್ನು 'ರೋಹಿಣಿ' ಎಂದರೆ ಸಾಕು. ಆದರೆ ನನಗೆ ಹೂಗಳನ್ನು ಮಾತ್ರ ಕೊಡು; ನನಗೆ ಅವುಗಳನ್ನು ಮುಡಿದು ಕೊಂಡಷ್ಟೂ ಸಾಲದು ಎನಿಸುತ್ತದೆ!" ಎಂದಳು.

"ನೀನು ರಾಮು ರಾಯರಲ್ಲಿಯೆ ಇದ್ದೀಯಾ? ಅವರು ನಿನಗೆ ಏನಾಗಬೇಕು?" ನಾನು ವಿಚಾರಿಸಿದೆನು.

"ಹೌದು. ಅವರು ನನಗೆ ಮಾವ," ರೋಹಿಣಿಯು ಉತ್ತರ ಕೊಟ್ಟಳು.

"ನೀನು ಎಷ್ಟು ಕಾಲದಿಂದ ಇಲ್ಲಿದ್ದೀ?" ನನ್ನ ಪ್ರಶ್ನೆ.

"ಆರು ತಿಂಗಳಿಂದ. ಅಪ್ಪ ತೀರಿಹೋದ ಮೇಲೆ ಅಮ್ಮ, ಸರಸು, ಕಿಟ್ಟು ಮತ್ತು ನಾನು ಇಲ್ಲಿಯೆ ಇದ್ದೇವೆ," ರೋಹಿಣಿಯು ನಮ್ರತೆಯಿಂದ ಹೇಳಿದಳು.

ಅವರ ಕತೆಯು ಎಷ್ಟು ಶೋಚನೀಯವಾದುದಾಗಿರಬೇಕು!– ಈ ಭಾವನೆಯಿಂದ ನನಗೆ ರೋಹಿಣಿಯ, ಮೇಲೆ ಮರುಕವುಂಟಾ ಯಿತು. ನಾನು, ಅವಳಿಗೆ ದುಃಖವಾದೀತೆಂದು ಎಣಿಸಿ, ಅವರ ವಿಷಯ ಹೆಚ್ಚಿನ ಪ್ರಸ್ತಾವವೆತ್ತುವ ಗೊಡವೆಗೆ ಹೋಗಲಿಲ್ಲ.

* * * *

ನಾನು ರೋಹಿಣಿಗೆ ಆ ದಿನ ಅವಳು ಹೊರಲಾರದಷ್ಟು ಹೂವನ್ನು ಕಿತ್ತು ಕೊಟ್ಟೆನು. ಗುಲಾಬಿ, ಸೇವಂತಿಗೆ, ದುಂಡು ಮಲ್ಲಿಗೆ, ಜಾಜಿಮಲ್ಲಿಗೆ, ಸುಗಂಧರಾಜ, ಕರವೀರ ಮುಂತಾ ದುವುಗಳ ಗಿಡಬಳ್ಳಿಗಳಲ್ಲಿ ಮುಗುಳುಗಳು ಮಾತ್ರ ಉಳಿದುವು. ನಮ್ಮ ತೋಟದೊಳಗಿನ ಅತಿ ಪುರಾತನವಾದ ಸಂಪಿಗೆಯ ಮರ

ವನ್ನೇರಿ, ನನ್ನ ಕೈಗೆ ಎಟಕುವ ಸಂಪಿಗೆಗಳನ್ನೆಲ್ಲ ಕೊಯ್ದು ರೋಹಿಣಿಗೆ ಕೊಟ್ಟೆನು. ಮುಖವನ್ನು ಮೊರದಷ್ಟು ಅಗಲಕ್ಕೆ ಅರಳಿಸಿ, ಅವುಗಳನ್ನೆಲ್ಲ ಎರಡೂ ಕೈಗಳಿಂದ ಬಾಚಿ ತಬ್ಬಿ ಹಿಡಿದುಕೊಂಡು, ಮನೆಯ ಕಡೆಗೆ ಹೋಗುವಾಗ, ರೋಹಿಣಿಯು 'ಹೂವಿನ ರಾಣಿ' ಎಂಬುದರಲ್ಲಿ ಸಂಶಯವೇನು?—ಎಂದು ನನಗೆ ಎನಿಸಿತು.

"ರೋಹಿಣಿ, ದಿನಾಲೂ ಬಂದು ಹೂಗಳನ್ನು ತೆಗೆದುಕೊಂಡು ಹೋಗಲು ಮರೆಯಬೇಡ!" ಎಂದು, ಅವಳು ಹೋಗುತ್ತಿರುವಾಗ ಕರೆದು, ಹೇಳಿದೆನು.

"ಮರೆಯುವುದು! ನಾನು ಬಾರದಿರಬೇಕಾದರೆ ನೀನಾಗಿಯೆ ನನಗೆ ಅಡ್ಡಿ ಮಾಡಬೇಕು!" ರೋಹಿಣಿಯು ನಸುನಗುತ್ತ ಎಂದಳು.

"ನಾನು ಇಲ್ಲಿರುವವರೆಗೆ ಆ ಅಂಜಿಕೆಯೆ ಬೇಡ! ದಿನಾಲೂ ತಪ್ಪದೆ ಬಾ!" ಎಂದು ಎರಡನೆಯ ಸಲ ಅವಳಿಗೆ ಎಚ್ಚರ ಕೊಟ್ಟೆನು.

ಅವಳು ಕಣ್ಮರೆಯಾಗುತಿದ್ದಂತೆಯೆ ಪ್ರಪಂಚದೊಳಗಿನ ಬೆಳಕೇ ಮಸಕಾದಂತಾಯಿತು; ಯಾವುದೋ ಒಂದು ಕಾರ್ಮೋಡವು ಬಂದು ನನ್ನನ್ನು ಮುಸುಕಿದಂತೆ ಭಾಸವಾಯಿತು. ಮರುದಿನವು ಯಾವಾಗ ಮೂಡುವುದೋ ಎಂದು ಹಾರೈಸುತ್ತ ಮನೆಯ ಕಡೆಗೆ ಹೋದೆನು.

೨

"ರಾಜಕುಮಾರನ ದಿಗ್ವಿಜಯವು ಮುಗಿಯಿತೇ?" ನಾನು ಮೆಟ್ಟಲನ್ನು ಏರುತ್ತಿರಲು, ಅಮ್ಮನಿಂದ ಜಡೆ ಹೆಣೆಯಿಸಿಕೊಳ್ಳುತಿದ್ದ ಸುಶೀಲೆಯು, ವ್ಯಂಗ್ಯವಾಗಿ ನಗುತ್ತ, ಕೇಳಿದಳು.

"ಎಲ್ಲಿಯ ರಾಜಕುಮಾರ? ಎಂತಹ ದಿಗ್ವಿಜಯ?" ನಾನು ತಟಸ್ಥನಾಗಿ ಕೇಳಿದೆನು.

"ನಮ್ಮ ರಾಜಕುಮಾರ. ಪ್ರಣಯದ ದಿಗ್ವಿಜಯ. ಗೆದ್ದ ರಾಜಕುಮಾರಿಯನ್ನು ಹಿಂದೆ ಬಿಟ್ಟೇ ಬಂದಿಯೇಕೆ?" ನನ್ನನ್ನು ಪರಿಹಾಸ್ಯ ಮಾಡುತ್ತ ಕೇಳಿದಳು, ಸುಶೀಲೆ.

"ನಾನರಿಯೆ; ನಿನಗೇ ಗೊತ್ತು!" ಎನ್ನುತ್ತ ನಾನು, ಲಜ್ಜೆಯಿಂದ ಮುಖ ಕೆಂಪೇರುತ್ತಿರಲು, ಅವಸರದಿಂದ ಒಳಕ್ಕೆ ಕಾಲಿಟ್ಟೆನು.

"ನೋಡಿದಿಯಾ, ಅಮ್ಮ?-ಮಂಗಳೂರಿನ ವಿದ್ಯೆಯ ಪ್ರಭಾವವನ್ನು? ಒಂದೇ ಕ್ಷಣದಲ್ಲಿ ಆ ದರ್ಪದ ಮುದ್ದೆ ರೋಹಿಣಿಯನ್ನು ಕಿಸೆಯೊಳಗೆ ತುರುಕಿಕೊಂಡು ಬಂದಿದ್ದಾನೆ, ನಮ್ಮ ವಾಸು. ಇಷ್ಟು ಹೊತ್ತಿನ ವರೆಗೆ ತೋಟದ ಗಿಡಮರಗಳನ್ನೆಲ್ಲ ಸದೆಬಡೆದು, ಅವಳನ್ನು ಹೂವಿನ ತೇರು ಮಾಡಿ ಕಳುಹಿಸಿರುವನು. ನಮ್ಮನ್ನಾದರೆ ತನ್ನ ಗಿಡದ ಒಂದೇ ಹೂವಿಗೂ ಮುಟ್ಟಗೊಡುತ್ತಿರದವನ ಈಹೊತ್ತಿನ ಕ್ರಮವನ್ನು ನೋಡು!" ಸುಶೀಲೆಯು ಕುಚೇಷ್ಟೆಯನ್ನು ಮುಂದುವರಿಸಿದಳು.

"ಅದರಿಂದ ಏನಾಯಿತು, ಸುಶೀ? ರೋಹಿಣಿಗಾಗಿಯೆ ಅವನು ಅವುಗಳನ್ನು ಕಾಯ್ದುಕೊಂಡು ಬಂದಿರಬೇಕು!" ಅಮ್ಮ ಸುಶೀಲೆಗೆ ಸಮಾಧಾನ ಹೇಳಿದರು.

"ಆಗುವುದೇನು? ರೋಹಿಣಿಯು ನಮ್ಮ ಅತ್ತಿಗೆಯಾದರೆ ನಮಗೆಲ್ಲರಿಗೂ ಸಂತೋಷವೇ!" ಸುಶೀಲೆ ಎಂದಳು.

"ರೋಹಿಣಿಯನ್ನು ಪಡೆಯಲು ಭಾಗ್ಯ ಬೇಕು. ವಾಸು ಚೆನ್ನಾಗಿ ಕಲಿತು ಹೆಸರು ತಂದರೆ, ರೋಹಿಣಿಯನ್ನು ವಾಸುವಿಗೆ ಕೊಡಲು ರಾಧಮ್ಮನಿಗೆ ಏನೂ ಆಕ್ಷೇಪವಿರದು. ಎರಡು ಸಾವಿರ ರೂಪಾಯಿ ವರದಕ್ಷಿಣೆಯನ್ನಾದರೂ ಕೊಡದಿರಲಿಕ್ಕಿಲ್ಲ. ಅವರೇ ಎಷ್ಟೋ ಸಲ ನನ್ನೊಡನೆ ಹಾಗೆ ಎಂದಿದ್ದಾರೆ," ಅಮ್ಮ ವಿವರಿಸಿದರು.

ಅಮ್ಮನ ಈ ಮಾತುಗಳನ್ನು ಕೇಳಿ ನನ್ನಲ್ಲಿ ಇಲ್ಲದ ಮಹತ್ವಾಕಾಂಕ್ಷೆಯು ಮೊಳೆಯಿತು. ನಾನು ಒಡನೆಯೆ ಗಾಳಿಗೋಪುರಗಳನ್ನು ಕಟ್ಟಲು ಮೊದಲುಮಾಡಿದೆನು. ಇನ್ನು ಮುಂದೆ ನನ್ನ ಪಾಠಗಳನ್ನು ಬಹಳ ಜಾಗ್ರತೆಯಿಂದ ಕಲಿತು, ಪ್ರತಿ ಪರೀಕ್ಷೆಯಲ್ಲಿಯೂ ಹೆಚ್ಚು 'ಮಾರ್ಕು'ಗಳನ್ನು ಪಡೆದು ಉತ್ತೀರ್ಣನಾಗಬೇಕೆಂದು ನಿರ್ಧಾರ ಮಾಡಿದೆನು.

*   *   *   *

ದಿನಾಲೂ, ಸಮಯವನ್ನು ಸುಮ್ಮನೆ ಹಾಳು ಮಾಡದೆ, ನಮ್ಮ ಮನೆಯಲ್ಲಿದ್ದ ಇಂಗ್ಲಿಷ್ ಪುಸ್ತಕಗಳನ್ನು ಓದತೊಡಗಿದೆನು. ಬೆಳಿಗ್ಗೆ ಫಲಾಹಾರವಾದ ಮೇಲೆ ಮಾತ್ರ ಎರಡು ಘಂಟೆಗಳ ವರೆಗೆ ನಾನು ತೋಟದ ಕೆಲಸವನ್ನು ಮಾಡುತ್ತಿದ್ದೆನು. ಅದರಲ್ಲಿ ಮುಕ್ಕಾಲಂಶ ಸಮಯವು ಮಾತ್ರ ರೋಹಿಣಿಗೆ ಹೂಗಳನ್ನು ಕೊಯ್ದು ಕೊಡುವುದರಲ್ಲಿಯೂ, ಅವಳೊಡನೆ ಮಾತಾಡುವುದರಲ್ಲಿಯೂ, ಕಳೆಯುತ್ತಿತ್ತೆಂದು ಹೇಳುವ ಅಗತ್ಯವಿಲ್ಲ.

ಆಗಿಂದಾಗ ನಾನು, ರೋಹಿಣಿಯ ಒತ್ತಾಯದಿಂದ, ಅವಳ ತೋಟವನ್ನು ನೋಡುವುದಕ್ಕಾಗಿಯೂ, ಅವಳಿಗೆ ಗಿಡಗಳ ವಿಷಯವಾಗಿ ತಕ್ಕ ಸಲಹೆ, ಸೂಚನೆಗಳನ್ನು ಕೊಡುವುದಕ್ಕಾಗಿಯೂ ಅವರಲ್ಲಿಗೂ ಹೋಗಿ ಬರತೊಡಗಿದೆನು.

ರೋಹಿಣಿ, ಸರಸು, ಕಿಟ್ಟು—ಇವರನ್ನು ನಾನು ಎಷ್ಟೋ ಸಲ ನಮ್ಮಲ್ಲಿ ಫಲಾಹಾರಕ್ಕೆ ಕರೆದುತಂದೆನು. ಅವರೂ ನನ್ನನ್ನು ಎಷ್ಟೋ ಸಲ ಅವರಲ್ಲಿ ಫಲಾಹಾರಕ್ಕೆ ಕರೆದೊಯ್ದರು. ಹೀಗೆ ನಮ್ಮ ಸಲಿಗೆಯು ದಿನದಿನವೂ ಹೆಚ್ಚುತ್ತ ಹೋಯಿತು.

ಕ್ರಮೇಣ ನನ್ನನ್ನು ರಾಧಮ್ಮನು ರೋಹಿಣಿಯ ಗಂಡನೆಂದೇ ಕರೆಯಲಾರಂಭಿಸಿದರು. ಇದರಿಂದ ನಾವಿಬ್ಬರೂ ಬಲು ಹೆಮ್ಮೆ

ಪಡುತ್ತಿದ್ದೆವು; ಅಲ್ಲದೆ ಒಮ್ಮೆಯಾದರೂ, ವಿನೋದಕ್ಕಾಗಿ ಕೂಡ, ಸಿಟ್ಟಾಗುತ್ತಿರಲಿಲ್ಲ.

*    *    *    *

ನಾವು ಹೀಗೆ ಸಂತೋಷಪಡುತ್ತಿದ್ದಂತೆಯೆ, ಕಾಲವು ಮಾತ್ರ ನಿಷ್ಪಕ್ಷಪಾತದಿಂದ ಮುಂದೆ ಸಾಗುತ್ತಲೇ ಇತ್ತು. ಅದರ ನಿರ್ದುಷ್ಟ ಗತಿಯಿಂದಾಗಿ ನನ್ನ ಎರಡು ತಿಂಗಳ ರಜೆಯು, ಹಾಗೆ ಹೀಗೆ ನೋಡುವುದರೊಳಗೆ, ಮುಗಿದುಹೋಯಿತು. ಇದು ನನಗೆ ಪಾರವಿಲ್ಲದ ದುಃಖಕ್ಕೆ ಕಾರಣವಾಯಿತು. ಅದೊಂದು ದಿನ, ಮಳೆಗಾಲದ ಮುಂಗಾರುಹನಿಗಳು ಬೀಳುತ್ತಿದ್ದಂತೆಯೆ, ನನ್ನ ಕಣ್ಣುಗಳಿಂದಲೂ ಮಳೆಗರೆಯುತ್ತ, ನಾನು ರೋಹಿಣಿಯನ್ನು ಬೀಳ್ಕೊಂಡೆನು. ಮುಂದಿನ ವಿದ್ಯಾಭ್ಯಾಸಕ್ಕಾಗಿ, ರೋಹಿಣಿಯನ್ನು ನನ್ನವಳಾಗಿ ಗೆಲ್ಲುವ ಯುದ್ಧವನ್ನು ಹೂಡುವುದಕ್ಕಾಗಿ, ತಿರುಗಿ ಮಂಗಳೂರಿಗೆ ಹೊರಟುಹೋದೆನು.

೩

ಕಾಲಚಕ್ರವು ಒಂದೇ ಸವನೆ ಉರುಳುತ್ತ ಹೋಯಿತು. ಎರಡು ಸುದೀರ್ಘ ವರ್ಷಗಳು ಕಾಲನ ಚೀಲದೊಳಗೆ ಬಿದ್ದು ಮಾರಿಯಾದುವು.

*    *    *    *

ಹಿಂದಿನ ವರ್ಷ ರಜೆಯಲ್ಲಿ ಮನೆಗೆ ಬರುವಾಗ ನಾನು ಎಷ್ಟೋ ಕನಸುಗಳನ್ನು ಕಟ್ಟಿಕೊಂಡು ಬಂದಿದ್ದೆನು. ಆದರೆ ಮನೆಗೆ ಬರುತ್ತಲೇ ಅವೆಲ್ಲವೂ ಕನಸಿನ ಪಾಡನ್ನೇ ಪಡೆದುವು. ಯಾಕೆಂದರೆ, ಆಗ ರೋಹಿಣಿಯು ರಾಮ ರಾಯರಲ್ಲಿ ಇರಲಿಲ್ಲ. ಅವಳ ತಾಯಿಯು ಮಕ್ಕಳೊಡನೆ ತನ್ನ ಮೈದುನನಲ್ಲಿಗೆ ಹೋಗಿ ನಿಂತಿದ್ದಳು. ಹಾಗಾಗಿ, ಮುಂಚಿನಂತೆಯೆ ಸೊರಗಿಹೋಗಿದ್ದ ನನ್ನ

ತೋಟದ ಕಡೆಗೆ ನಾನು ಕಡೆಗಣಿಸಿಯೂ ನೋಡಲಿಲ್ಲ. ರೋಹಿಣಿಯ ದರ್ಶನವನ್ನು ಪಡೆಯಲೆಂದು ಒಂದು ವರ್ಷದಿಂದ ಮಾಡಿದ ತಪಸ್ಸೆಲ್ಲ ವ್ಯರ್ಥವಾದುದಕ್ಕಾಗಿ ನಾನು ನಿಜವಾಗಿಯೂ ಕಣ್ಣೀರ ಹಳ್ಳಗಳನ್ನು ಹರಿಯಿಸಿದೆನು.

ಅಂತೂ ಈ ರಜೆಯ ಎರಡು ತಿಂಗಳುಗಳನ್ನು ಹೇಗೆ ಕಳೆಯುವುದೆಂಬುದೇ ನನಗೆ ಒಂದು ದೊಡ್ಡ ಸಮಸ್ಯೆಯಾಯಿತು. ಕಡೆಗೆ ಗಂಡನ ಮನೆಯಲ್ಲಿದ್ದ ನನ್ನ ಅಕ್ಕನನ್ನು ಕರೆದುತರುವುದಕ್ಕೆ ಅವರೂರಿಗೆ ಹೋಗುವ ಕೆಲಸವೊಂದು ದೊರಕಿದುದರಿಂದ ನಾನು ಹುಚ್ಚು ಹಿಡಿಯುವ ಪ್ರಮೇಯದಿಂದ ಪಾರಾದೆನು.

ಆ ವರ್ಷ ರಜೆ ಮುಗಿದ ಮೇಲೆ ಮಂಗಳೂರಿಗೆ ಮರಳುವಾಗ ನನ್ನ ಹಿಂದಿನ ವರ್ಷದ ಉತ್ಸಾಹವೆಲ್ಲ ಕುಗ್ಗಿಹೋಗಿತ್ತು. ನಾನು ಯಾವೊಂದು ನಿಶ್ಚಿತ ಉದ್ದೇಶವನ್ನೂ ಇಟ್ಟುಕೊಳ್ಳದೆ, ತೇಲಬಿಟ್ಟ ದೋಣಿಯಂತೆ, ಅಲೆಯತೊಡಗಿದೆನು.

* * * *

ಹೀಗಾಗಿ ಈ ವರ್ಷದ ನನ್ನ ವಿದ್ಯಾಭ್ಯಾಸದ ಪ್ರಗತಿಯು ಬಹು ಶೋಚನೀಯವಾಗಿತ್ತು. ಅದರಲ್ಲಿಯೂ ಈ ವರ್ಷ ನನಗೆ ಬಿ. ಎ. ಪರೀಕ್ಷೆಗೆ ಕೂತುಕೊಳ್ಳಲಿತ್ತು; ಹೆಚ್ಚಿನ ಓದುವಿಕೆಯ ಆವಶ್ಯಕತೆಯಿತ್ತು. ಆದರೆ ಮನಸ್ಸು ಸ್ತಿಮಿತದಲ್ಲಿದ್ದರಷ್ಟೆ ಓದುವುದು, ಬರೆಯುವುದು? ಪರಿಣಾಮವಾಗಿ, ಪರೀಕ್ಷೆಯ ಸಮಯವು ಹತ್ತಿರವಾದಂತೆಯೆ ನಾನು ಎಲ್ಲವನ್ನೂ ಬಿಟ್ಟು 'ಪರಾರಿ' ಯಾಗುವ ಯೋಚನೆ ಮಾಡತೊಡಗಿದೆನು.

ಆದರೆ ಇಷ್ಟರಲ್ಲಿಯೆ ನನ್ನ ತಂದೆಯವರ ಆರ್ಥಿಕ ಸ್ಥಿತಿಯು, ಅವರು ಕೈಕೊಂಡ ಕೆಲವು ಉದ್ಯಮಗಳಲ್ಲಿನ ಅಯಶಸ್ವಿತೆಯಿಂದಾಗ, ಇಳಿಮೊಗವಾಗಿತ್ತು. ಆದುದರಿಂದ ನನಗಾಗಿ ಇಷ್ಟು ವೆಚ್ಚಮಾಡಿದುದೂ ನೀರಲ್ಲಿ ಹೋಮ ಮಾಡಿದಂತಾಗಿ, ಮುಂದಕ್ಕೆ ಕಷ್ಟವಾ

ದೀತೆಂಬ ಅಂಜಿಕೆಯು ನನಗೆ ತಲೆದೋರಿತು. ಇದರಿಂದಾಗಿ ಪರೀಕ್ಷೆಗೆ ಕೆಲವು ದಿನಗಳಿರುವಾಗ, ಜೀವದ ಮೇಲಿನ ಹಂಗುದೊರೆದು, ಓದತೊಡಗಿದೆನು. ಹದಿನೈದು ದಿನ ರಾತ್ರಿಯಿಡೀ ಎಣ್ಣೆ ಬತ್ತಿಸಿದೆನು. ಇದರ ಫಲವಾಗಿ, ಪರೀಕ್ಷೆಯಲ್ಲಿ ಉತ್ತೀರ್ಣನಾದೇನೆಂಬ ಭರವಸೆಯಿಂದ ಕೂಡಿಯೆ ರಜೆಯನ್ನು ಖರ್ಚುಮಾಡುವುದಕ್ಕಾಗಿ ಊರಿಗೆ ಹೊರಟುಬಂದೆನು.

* * * *

ಈ ಸಲ ರೋಹಿಣಿಯು ನಮ್ಮ ನೆರೆಮನೆಯಲ್ಲಿಯೆ ಇರುವಳೆಂಬ ವಾರ್ತೆಯನ್ನು ಕೇಳಿ ನನಗೆ ಉಂಟಾದ ಸಂತೋಷವು ಎಲ್ಲೆಯರಿಯದಂತಾಯಿತು. ಆ ದಿನ ನಾನು ಊರಿಗೆ ಸಂಜೆಯ ಮೊದಲೇ ಬಂದುಮುಟ್ಟಿದ್ದೆನು. ಫಲಾಹಾರವನ್ನಿಷ್ಟು ತೆಗೆದುಕೊಂಡ ಮೇಲೆ, ದಣಿವಾರಿಸಿಕೊಳ್ಳುವ ಯೋಚನೆಯನ್ನೂ ಮಾಡದೆ, ರಾಮರಾಯರಲ್ಲಿಗೆ ಹೋದೆನು.

ಅಲ್ಲಿ ನನ್ನನ್ನು ಕಿಟ್ಟುವೇ ಬರಮಾಡಿಕೊಂಡನು. ಅವನು ನನಗೆ ಕೂತುಕೊಳ್ಳಲು ಒಂದು ಕುರ್ಚಿಯನ್ನು ಕೊಟ್ಟು ಒಳಗೆ ಹೋದನು.

ಈಗಲಾದರೂ ನನ್ನ ಮನೋದೇವಿಯನ್ನು ಕಾಣುವ ಬಯಕೆಯು ತೀರುವುದಲ್ಲ! ಆನಂದದಿಂದ ನಾನು ಬಲು ಉಬ್ಬಿದೆನು.

ಆದರೆ ಎಷ್ಟು ಹೊತ್ತು ಕಾಯ್ದರೂ ಯಾರೂ ಹೊರಗೆ ಬರಲಿಲ್ಲ. ಕಡೆಗೆ ನಾನು ಅಧೀರನಾಗುತ್ತಬಂದೆನು.

ಅಷ್ಟರಲ್ಲಿ ರಾಧಮ್ಮನು ಮೆಲ್ಲಗೆ ಬಾಗಿಲ ಬಳಿಯಲ್ಲಿ ಕಾಣಿಸಿಕೊಂಡರು. ಅವರು ಒಂದೆರಡು ವಾಡಿಕೆಯ ಮಾತುಗಳನ್ನು ಆಡಿ ಸುಮ್ಮನಾದರು. ನಾನು ರೋಹಿಣಿಯ ಮಾತನ್ನು ಎತ್ತಲೆಂದು ಎಷ್ಟೋ ಯತ್ನಿಸಿದೆನು. ಆದರೆ ನನ್ನಿಂದ ಸಾಧ್ಯವಾಗಲಿಲ್ಲ.

ಸ್ವಲ್ಪ ಸಮಯದ ಬಳಿಕ ನಾನು ಇನ್ನು ಹೆಚ್ಚು ಹೊತ್ತು ಆ ಪರಿಸ್ಥಿತಿಯಲ್ಲಿ ಇರಲಾರದಾದೆನು. ಕೊನೆಗೆ ರಾಧಮ್ಮನನ್ನು ಬೀಳ್ಕೊಂಡು, ಮನೆಗೆ ಹಿಂತಿರುಗಿದೆನು.

* * * *

ನನ್ನ ಮುಖದ ಮ್ಲಾನತೆಯಿಂದಾಗಿ, ನಡೆದುದೆಲ್ಲವೂ ಅಮ್ಮನಿಗೆ ಕ್ಷಣಾರ್ಧದಲ್ಲಿ ಹೊಳೆದುಹೋಯಿತು.

"ಮಗೂ, ರೋಹಿಣಿಯ ಆಸೆಯನ್ನು ಇನ್ನೂ ಕಟ್ಟಿಕೊಳ್ಳಬೇಡ. ಅವರು ನಮ್ಮ ಈಗಿನ ಸ್ಥಿತಿಯನ್ನು ಲಕ್ಷಿಸಿ, ನಮ್ಮ ನೆಂಟಸ್ತಿಕೆ ಮಾಡುವ ಯೋಚನೆಯನ್ನೇ ಬಿಟ್ಟಿರುವರೆಂದು ತೋರುತ್ತದೆ. ಅವಳಿಗೆ ಇಷ್ಟರಲ್ಲಿಯೆ ಬೇರೆ ಸಂಬಂಧವನ್ನೂ ಮಾತಾಡಿರುವರೆಂದು ಕಾಣುತ್ತದೆ!" ಅಮ್ಮ ಎಂದರು.

ನಾನು ಮಾತಾಡದೆ ನನ್ನ ಕೋಣೆಗೆ ಹೋದೆನು. ಮೂಕರೋದನದಿಂದ ಎದೆಯ ಭಾರವನ್ನು ತಗ್ಗಿಸಿಕೊಂಡೆನು.

* * * *

ಆಮೇಲೆ ನಾನು ನನ್ನ ತೋಟದಲ್ಲಿ ಸುತ್ತಾಡುವಾಗ ಒಂದೆರಡು ಸಲ ರೋಹಿಣಿಯನ್ನು ಅವರ ತೋಟದಲ್ಲಿ ಕಂಡೆನು, ದೂರದಿಂದಲೇ. ಹತ್ತಿರ ಹೋಗುವ ಸಾಹಸವನ್ನು ಇಬ್ಬರೂ ಮಾಡಲಿಲ್ಲ. ಆದರೆ ಪ್ರತಿ ಸಲವೂ ನನ್ನನ್ನು ಕಾಣುತ್ತಲೇ, ಲಾವಣ್ಯದಿಂದ ತುಂಬಿತುಳುಕುವ ಅವಳ ಮುಖದ ಮೇಲೆ ಮುಸುಕಾದ ನಸುನಗುವು ಮೂಡಿ ಮರೆಯಾದಂತೆ ನನಗೆ ಎನಿಸಿತು. ನಾನು ನನ್ನ ಕೋಣೆಗೆ ಮರಳಿ, ಮೌನವಾಗಿ ಸಾಕಷ್ಟು ಕಂಬನಿ ಸುರಿಸಿದೆನು.

ಹಾಗೆಯೆ ಕೆಲವು ದಿನಗಳಲ್ಲಿಯೆ ರಾಧಮ್ಮನು ಮಕ್ಕಳೊಡನೆ ಮೈದುನನ ಮನೆಗೆ ಹೋದಳೆಂದು ಕೇಳಿದೆನು. ಮತ್ತೆ ಕೆಲವು ದಿನಗಳಲ್ಲಿಯೆ ರೋಹಿಣಿಗೆ ಅಲ್ಲಿಯೆ ಮದುವೆಯಾಯಿತೆಂದೂ ತಿಳಿದೆನು. ಬರೀ ಒಂದು ಹಣವು, ನಡುವೆ ಬಂದು, ರೋಹಿಣಿಯನ್ನು

ನನ್ನ ಕೈಯಿಂದ ಕಿತ್ತುಕೊಂಡು ಬೇರೊಬ್ಬನಿಗೆ ಕೊಟ್ಟುಬಿಟ್ಟಿತು; ನನ್ನನ್ನು ಆಜೀವ ದುಃಖಿಯನ್ನಾಗಿ ಮಾಡಿಬಿಟ್ಟಿತು. ಇದಕ್ಕಾಗಿ ನನ್ನ ಅದೃಷ್ಟವನ್ನು ಮನದಣಿಯೆ ಹಳಿದೆನು.

ಇದರಿಂದಾಗಿ ಆಗಲೇ ತಿಳಿದುಬಂದ ನನ್ನ ಯಶಸ್ವಿಯಾದ ಪರೀಕ್ಷೆಯ ಫಲಿತಾಂಶವು ಸಹ ನನಗೆ ಒಂದಿಷ್ಟೂ ಸಂತೋಷವನ್ನು ಉಂಟುಮಾಡಲಿಲ್ಲ. ಅದರ ಬದಲಿಗೆ ಅದು ನನ್ನ ಎದೆಯೊಳಗೆ ಇನ್ನೊಂದು ಕೊರಲಗನ್ನೇ ತಿವಿಯಿತು.

ಆ ಬಳಿಕ ನಾನು ಹೆಚ್ಚು ಸಮಯ ಮನೆಯಲ್ಲಿ ಇರಲಾರದಾದೆನು. ಕೆಲಸವನ್ನು ಹುಡುಕಲೆಂದು ಮುಂಬಾಯಿಗೆ ಹೊರಟು ಹೋದೆನು.

೪

ಎರಡು ವರ್ಷಗಳನ್ನು ನಾನು ಮುಂಬಾಯಿಯಲ್ಲಿ ಕಳೆದೆನು. ನನಗೆ ಬಹಳ ಪ್ರಯತ್ನದಿಂದ ಒಂದೆರಡು ಕೆಲಸಗಳು ಸಿಕ್ಕಿದ್ದರೂ ಅವು ತೃಪ್ತಿಕರವಾಗಿರಲಿಲ್ಲ. ಹಾಗಾಗಿ ನಾನು ಸ್ವಲ್ಪ ಸಮಯ ನೋಡಿದ ಬಳಿಕ ಅವುಗಳನ್ನು ಬಿಟ್ಟುಬಿಟ್ಟು, ಸಮಾಧಾನಕರವಾದ ಬೇರೆ ಕೆಲಸವನ್ನು ಹುಡುಕುತ್ತಲೇ ಇದ್ದೆನು. ನನ್ನಿಂದ ತಂದೆಯವರಿಗೆ, ಮೊದಲು ಊಹಿಸಿದಂತೆ ಸಹಾಯವಾಗುವ ಬದಲಿಗೆ, ಅವರೇ ನನಗೆ ಪ್ರತಿ ತಿಂಗಳೂ ಮೂವತ್ತು ರೂಪಾಯಿಗಳನ್ನು ಕಳುಹಿಸಿಕೊಡುವಂತಾಗಿ, ತೊಂದರೆಯೆ ಆಯಿತು.

ಹಾಗೆಯೆ ಒಂದು ದಿನ ತಂದೆಯವರ ಒಂದು ತಂತಿ ಬರಲು ನಾನು ಕೂಡಲೇ ಹೊರಟು ಊರಿಗೆ ಬಂದೆನು.

ತಂದೆಯವರು ತನ್ನ ಆರ್ಥಿಕ ಸಂಕಷ್ಟದಿಂದ ಪಾರಾಗಿದ್ದರು. ನನ್ನನ್ನು ಅವರ ಆಸ್ತಿಯ ಮೇಲ್ವಿಚಾರ ನೋಡಲು ಕೇಳಿಕೊಳ್ಳು

ವುದೇ ಅವರ ತಂತಿಯ ಉದ್ದೇಶವಾಗಿತ್ತು. ನಾನು ಅವರ ಸೂಚನೆಯನ್ನು ಒಪ್ಪಿಕೊಂಡು ಊರಲ್ಲೇ ಉಳಿದುಬಿಟ್ಟೆನು.

* * * * *

ಒಂದು ದಿನ ಸಂಜೆ, ನಾನು ಆಸ್ತಿಯ ಕಡೆಯಿಂದ ದಣಿದು ಬಂದವನು, ನಮ್ಮ ತೋಟದಲ್ಲಿ ವಾಯುಸೇವನೆ ಮಾಡುತ್ತ ಅಲೆದಾಡುತಿದ್ದೆನು. ಅಭ್ಯಾಸಬಲದಿಂದ ನನ್ನ ದೃಷ್ಟಿಯು ರಾಮು ರಾಯರ ಮನೆಯ ಕಡೆಗೆ ಹರಿಯಿತು.

ಒಡನೆ ನಾನು ಸ್ತಂಭೀಭೂತನಾದೆನು: ರೋಹಿಣಿಯು, ಹಿಂದೆ ಮೊತ್ತಮೊದಲು ಕಂಡುಬಂದ ಸ್ಥಳದ ಹತ್ತಿರದಲ್ಲಿಯೆ, ಗೋಡೆಯ ಆಚೆಗೆ ನಿಂತಿದ್ದಳು. ಈಗ ಅವಳು ಪೂರ್ಣಯೌವನಭರಿತೆಯಾಗಿ, ಹೊಳೆಯುವ ಸೌಂದರ್ಯದಿಂದ ಕೂಡಿಕೊಂಡಿದ್ದಳು.

ನನ್ನನ್ನು ನೋಡುತ್ತಲೇ ಅವಳು, ಸ್ವಲ್ಪವೂ ಲಜ್ಜೆತೋರದೆ, ತನ್ನ ಸುಂದರವಾದ ತುಟಿಗಳನ್ನು ಅರಳಿಸಿ ನಸುನಕ್ಕಳು. ನಾನು, ನಗುವುದೋ ಅಳುವುದೋ ಎಂದು ತಿಳಿಯಲಾರದೆ, ತುಟಿಗಳನ್ನು ಹೇಗೋ ಮಾಡಿದೆನು. ರೋಹಿಣಿಗೆ ಅದರಿಂದ ನಾನು ನಕ್ಕಂತೆ ತೋರಿತೋ, ಅತ್ತಂತೆ ತೋರಿತೋ! ಅಂತೂ, ಅವಳ ಮುಖದಲ್ಲಿ ಆಗ ಕನಿಕರವು ಒಡೆದುತೋರುತಿತ್ತು. ಅವಳು ನನ್ನನ್ನೇ ನೋಡುತ್ತಿರಲು, ನಾನು, ನನ್ನ ದೃಷ್ಟಿಯನ್ನು ಅವಳ ದೃಷ್ಟಿಯೊಡನೆ ಸೇರಿಸಲು ಅಂಜಿ, ಚಂಚಲತೆಯಿಂದ ಅತ್ತಿತ್ತ ನೋಡತೊಡಗಿದೆನು.

ರೋಹಿಣಿಯನ್ನು ನೋಡುತ್ತಲೇ ಅವಳನ್ನು ಮಾತಾಡಿಸಬೇಕೆಂಬ ಹಂಬಲು ನನ್ನಲ್ಲಿ ತೀವ್ರವಾಗಿ ಉಂಟಾಯಿತು. ಆದರೆ, ಅವಳು ನನ್ನವಳಾಗಲಿಲ್ಲವಲ್ಲ!—ಎಂಬ ಭಾವನೆಯು ಮುಂದೆ ಬರುತ್ತಲೇ ಅವಳೊಡನೆ ಮಾತಾಡುವುದು ಅಪರಾಧವೆನಿಸಿತು. ಹಾಗಾಗಿ ನಾನು ಮೌನವಾಗಿಯೆ ನಿಂತೆನು.

ಕೊನೆಗೆ ರೋಹಿಣಿಯು ಮೌನವನ್ನು ತಾಳಲಾರದಾದಳು.

"ವಾಸಣ್ಣ!" ಅವಳು ನನ್ನನ್ನು ಕರೆದಳು.

ನನ್ನ ಎದೆಯಲ್ಲಿ ಚೂಪಾದ ಚೂರಿಯನ್ನು ಚುಚ್ಚಿದಂತಾಯಿತು. ನಾನು ಅವಳ ಕಣ್ಣುಗಳನ್ನು ಪ್ರಶ್ನಾರ್ಥಕಭಾವದಿಂದ ದಿಟ್ಟಿಸಿದೆನು.

"ವಾಸಣ್ಣ! ಈಚೆಗೆ ಬರಲಾರಿಯಾ?" ರೋಹಿಣಿಯು ಸಂಕೋಚವಿಲ್ಲದೆ ಕೇಳಿದಳು.

ನಾನು ಏನೂ ಮಾತಾಡಲಾರದೆ ಅವಳಿದ್ದ ಕಡೆಗೆ ಹೋದೆನು.

"ಅಂದು ನಿನ್ನನ್ನು ಮೊದಲು ಕಂಡಾಗ ನಾನು ಈ ಗೋಡೆಯನ್ನು ಎಷ್ಟು ಸುಲಭವಾಗಿ ಹಾರಿ ನಿನ್ನ ಬಳಿಗೆ ಬಂದಿದ್ದೆ! ಆದರೆ ಈಗ ನಿನ್ನನ್ನೇ ನನ್ನ ಬಳಿಗೆ ಕರೆಯಬೇಕಾಯಿತು!" ಅವಳು, ಮೊದಲಿನಂತೆಯೆ ಬಹಳ ಸಲಿಗೆಯಿಂದ, ಎಂದಳು.

ನನಗೆ ಮೊದಲು ಅವಳ ಮಾತಿನ ಅರ್ಥವಾಗಲಿಲ್ಲ. ಆದರೆ ಅವಳ ಉಬ್ಬಿದ ಹೊಟ್ಟೆಯ ಕಡೆಗೆ ನೋಡುತ್ತಲೇ ನನ್ನ ಎದೆಯಲ್ಲಿ 'ಧಸಕ್' ಎನಿಸಿತು: ಅವಳು ಏಳೆಂಟು ತಿಂಗಳ ಗರ್ಭಿಣಿಯಾಗಿದ್ದಳು!

"ನೀನೇನು ಮಾತಾಡುವುದಿಲ್ಲ, ವಾಸಣ್ಣ? ನಿನ್ನ ಗಿಡಬಳ್ಳಿಗಳು ಹೇಗಿವೆ? ಓಹೊ! ಅವು ಮುಂಚಿಗಿಂತಲೂ ಹೆಚ್ಚಾಗಿ ಸೊರಗಿದಂತೆ ಕಾಣುತ್ತಿವೆ! ಒಂದಕ್ಕೂ ಹೂವೇ ಇಲ್ಲ! ಇದೇನು, ನೀನು ಅವುಗಳ ಆರೈಕೆಯನ್ನು ಸರಿಯಾಗಿ ಮಾಡುವುದಿಲ್ಲವೇ?" ಅವಳು ಪ್ರಶ್ನೆಗಳ ಸುರಿಮಳೆಯನ್ನೇ ಕರೆದಳು.

"ರೋಹಿಣಿ! ಯಾರಿಗಾಗಿ ಅವುಗಳ ಆರೈಕೆ ನೋಡಲಿ? ಅವುಗಳ ಮೇಲಿನ ಹೂಗಳನ್ನು ಪಡೆಯುತ್ತಿದ್ದ ನೀನಂತೂ ನನಗೆ ಕಣ್ಮರೆಯಾದಿ!" ನಾನು ವಿಶದಪಡಿಸಿದೆನು.

"ಇಗೋ, ನಾನು ಇಲ್ಲಿಯೆ ಇದ್ದೂ, ಕಣ್ಮರೆಯಾದೆ ಎನ್ನು ತ್ತೀಯಲ್ಲ! ನನಗಾಗಿ, ನಿನ್ನ ಇಂದಿನ ತಂಗಿಗಾಗಿ, ನಿನ್ನ ಅಂದಿನ 'ಹೂವಿನ ರಾಣಿ'ಗಾಗಿ, ಯಾಕೆ ಅವುಗಳ ಆರೈಕೆ ನೋಡಬಾರದು, ವಾಸಣ್ಣ?" ಅವಳು ಸಲಿಗೆಯಿಂದ ಕೇಳಿದಳು.

"ಒಳ್ಳೆಯದು. ಇಗೋ, ಈಗಲೇ ಹೊರಟೆ. ಅವುಗಳಲ್ಲಿ ಅರಳಿದ ಹೂಗಳನ್ನು ತಾರದೆ ನಿನ್ನ ಬಳಿಗೆ ಬರಲಾರೆ!" ನಾನು ಭಾಷೆ ತೊಟ್ಟೆನು.

*   *   *   *

ಅಂದಿನಿಂದ ನಾನು ನನ್ನ ಗಿಡಬಳ್ಳಿಗಳ ಸೇವೆಯನ್ನು ಎಡೆ ಬಿಡದೆ ಮಾಡಿದೆನು. ಅವುಗಳ ಬುಡದ ಮಣ್ಣನ್ನು ಕೊಚ್ಚಿ, ಗೊಬ್ಬರ ಹಾಕಿ, ದಿನಾಲೂ ನೀರು ಹೊಯ್ಯತೊಡಗಿದೆನು. ನನ್ನ ಅವಿಶ್ರಾಂತ ಪ್ರಯತ್ನದ ಫಲವಾಗಿ ಒಂದು ತಿಂಗಳಲ್ಲಿಯೆ ಗುಲಾಬಿಯ ಗಿಡಗಳಲ್ಲೆಲ್ಲ ಮುಗುಳುಗಳು ತೋರಿದುವು. ಇನ್ನೇನು, ಒಂದೆರಡು ದಿನಗಳಲ್ಲಿಯೆ ಅವು ಅರಳುವುವು; ಆಗ ಆವುಗಳ ದೊಡ್ಡದೊಂದು ಮಾಲೆಯನ್ನೇ ಮಾಡಿ ರೋಹಿಣಿಗೆ ಕೊಡಬೇಕು!— ಎಂದು ಹವಣಿಸಿದೆನು.

ದಿನ ಹೋದಂತೆ ಮುಗುಳುಗಳು ದೊಡ್ಡವಾಗುತ್ತ ಬಂದುವು. ಒಂದು ದಿನ, ಕೆಂಪು, ಹಳದಿ, ಬಿಳಿ, ಗುಲಾಬಿ ಬಣ್ಣದ ಎಸಳುಗಳು ತಮ್ಮ ಹಸುರು ಕುಲಾವಿಯ ಎಡೆಯಿಂದ ಬೆಳಕನ್ನು ಇಣಿಕಿ ನೋಡತೊಡಗಿದುವು. ಕ್ರಮೇಣ ಅವು ಹೆಚ್ಚುಹೆಚ್ಚಾಗಿ ಹೊರಗಿನ ಪ್ರಪಂಚವನ್ನು ನೋಡಲಾರಂಭಿಸಿದುವು. ಕಡೆಗೆ ಒಂದು ದಿನ ಬೆಳಿಗ್ಗೆ ನಾನು ಎದ್ದು ನೋಡುವಾಗ ನೂರಾರು ಗುಲಾಬಿಗಳು ನಗುತ್ತ ನನಗೆ ಸ್ವಾಗತ ಬಯಸುತಿದ್ದುವು.

ನಾನು ಬಲು ಹಿಗ್ಗುತ್ತ, ಹೆಮ್ಮೆ ಪಡುತ್ತ, ಅವುಗಳನ್ನೆಲ್ಲ ಕೊಯ್ದು ತೆಗೆದೆನು. ಅಲ್ಲಿಯೆ ಒಂದು ಕಲ್ಲಿನ ಮೇಲೆ ಕುಳಿತು,

ಉದ್ದವಾದ ಒಂದು ನಾರಿಗೆ ಪೋಣಿಸಿ, ಅವುಗಳ ಮಾಲೆಯನ್ನು ಮಾಡಿದೆನು. ಅದರ ಕೊನೆಯ ಗುಲಾಬಿಯನ್ನು ಪೋಣಿಸುತ್ತಲೇ ರಾಮು ರಾಯರ ಮನೆಯಿಂದ ದೊಡ್ಡದಾದ ಗಲಭೆ ಕೇಳಿಬಂತು. ನಾನು ಮಾಲೆಯನ್ನು ಅಲ್ಲಿಯೆ ಬಿಟ್ಟು, ಒಂದೇ ದಮ್ಮಿಗೆ ಗೋಡೆಯನ್ನು ಹಾರಿ, ಓಡುತ್ತ ಅವರ ಮನೆಯನ್ನು ಸೇರಿದೆನು.

ಅಲ್ಲಿ ನೋಡಿದ ದೃಶ್ಯವನ್ನು ನನ್ನ ಮನಸ್ಸಿನೊಳಗಿಂದ ಅಂತಕನೇ ಅಳಿಸಬೇಕು: ನನ್ನ 'ಹೂವಿನ ರಾಣಿ'ಯು, ಅವಳಿಗಾಗಿ ನಾನು ಆಗಲೇ ಪೋಣಿಸಿದ ಹೂವಿನ ಮಾಲೆಯನ್ನು ತುಚ್ಛವೆಂದು ತೊರೆದು, ಅಮರವಾದ ಸ್ವರ್ಗೀಯ ಪುಷ್ಪಹಾರವನ್ನು ಪಡೆಯುವುದಕ್ಕಾಗಿ ಆಗತಾನೇ ಹೋಗಿಬಿಟ್ಟಿದ್ದಳು!

ನನ್ನ **ನೆರೆಮನೆಯ ಹುಡುಗಿ** ಎಂದೆಂದಿಗೂ ಮರೆಯಾದಳು. ಇನ್ನು ನನಗೆ ಈ ಪ್ರಪಂಚದಲ್ಲಿ ಏನುತಾನೇ ಉಳಿದಿರುವುದು?

# ಒಲುಮೆಯ ಚಿಲುಮೆ

ಸುಶೀಲೆ ನಮ್ಮಲ್ಲಿಗೆ ಬಂದ ದಿನದಿಂದಲೂ ನನ್ನ ಮನಸ್ಸು ಒಂದು ಕ್ಷಣವಾದರೂ ಶಾಂತಿ ಎಂಬುದನ್ನೇ ತಿಳಿಯದು: ಅವಳು ಬರುವ ಮುಂಚೆ ನನಗೆ ಎಲ್ಲದರಲ್ಲಿಯೂ ಸ್ವಾತಂತ್ರ್ಯವಿತ್ತು; ಬಂದ ಸ್ವಲ್ಪ ದರಲ್ಲಿಯೆ ಅದು ಕ್ರಮಕ್ರಮವಾಗಿ ಪೂರಾ ಅಪಹರಿಸಲ್ಪಟ್ಟಿತು.

ನನ್ನ ಕೋಣೆ, ಮೇಜು, ಕುರ್ಚಿ, ಒರಗುಕುರ್ಚಿ, ಮಂಚ, ಕನ್ನಡಿ, ಬಾಚಣಿಗೆ, ಬ್ರಶ್ಶು, ಬ್ರಿಲಿಯಂಟಾಯ್ಲ್ ಕರಡಿಗೆ, ಸೆಂಟ್ ಸೀಸೆ, ರಿಸ್ಟ್‌ವೊಚು, ಫೌಂಟನ್ ಪೆನ್ನು, ಪುಸ್ತಕಗಳು,—ಇವೆಲ್ಲ ಮೊದಲು ನನ್ನೊಬ್ಬನವೇ ಆಗಿದ್ದುವು; ಸುಶೀಲೆ ಇಷ್ಟರಲ್ಲಿಯೆ ತಾನೂ ಅವುಗಳ ಮೇಲೆ ಸಮಾನವಾದ ಅಧಿಕಾರ ನಡೆಸತೊಡಗಿದಳು.

* * * *

ನಾನು ಕತೆ ಇಲ್ಲವೆ ಕಾದಂಬರಿ ಓದುತ್ತಿರುವೆನು.

"ನನಗೂ ಅದನ್ನು ಓದಿಹೇಳು, ಮನೂ!" ಸುಶೀಲೆ ಒತ್ತಾಯ ಮಾಡುವಳು.

ಸೈ! ನಾನು ಎಷ್ಟೇ ಮುಂದುವರಿದಿರಲಿ; ತಿರುಗಿ ಮೊದಲಿಂದ ಓದಿಹೇಳುವುದು ನನ್ನ ಕೆಲಸವಾಗುವುದು.

ನಾನು ಹಾರ್ಮೋನಿಯಮ್ ಅಥವಾ ಫಿಡ್ಲ್ ಬಾರಿಸುತ್ತಿರುವೆನು.

"ಮನೂ! ನನಗೂ ಅದನ್ನು ಬಾರಿಸಲು ಕಲಿಸಲಾರಿಯಾ?" ಸುಶೀಲೆ ದಿನಾಲೂ ಕಾಡುವಳು.

ಸರಿ! ಕಡೆಗೆ ನಾನು ಅವಳ ಸಂಗೀತಶಿಕ್ಷಕನಾದೆನು.

ನಾನು ಇಂಗ್ಲಿಷ್ ಓದುತ್ತಿರುವೆನು.

“ಮನೂ, ನನಗೂ ಇಂಗ್ಲಿಷ್ ಹೇಳಿಕೊಡೊ!” ಸುಶೀಲೆ ನಿತ್ಯವೂ ನನ್ನ ಪ್ರಾಣ ಹಿಂಡುವಳು.

ಆಯಿತು! ಕೊನೆಗೆ ನಾನು ಅವಳ ಇಂಗ್ಲಿಷ್ ಪ್ರೊಫೆಸರನೂ ಆದೆನು.

* * * *

ಸುಶೀಲೆಯ ಈ ತರದ ವರ್ತನದಿಂದ ನನಗೆ ನನ್ನ ಆಟ ಪಾಟಗಳಲ್ಲಿ ಎಷ್ಟೋ ತೊಂದರೆಯಾಯಿತು; ಆದರೂ ಅದನ್ನು ನಿರೋಧಿಸಲು ನನಗೇನೋ ಮೊದಲಿನಿಂದಲೂ ಮನಸ್ಸೇ ಬಾರದು. ಅವಳಿಗೆ ಯಾವುದನ್ನಾದರೂ ‘ಆಗದು’ ಎಂದು ಹೇಳಲಂತೂ ನನ್ನಿಂದ ಅದಕ್ಕಿಂತ ಮುಂಚೆಯೆ ಸಾಗದು. ಕಾರಣ: ಅವಳು ತಬ್ಬಲಿಯಾಗಿ ನಮ್ಮಲ್ಲಿಗೆ ಬಂದಿದ್ದಳು;—ಹನ್ನೆರಡನೆಯ ವಯಸ್ಸಿನಲ್ಲಿಯೆ ಪ್ರೀತಿಯ ತಂದೆತಾಯಂದಿರನ್ನು ಆಕಸ್ಮಿಕವಾಗಿ ಕಳೆದುಕೊಂಡಿದ್ದಳು. ಮಾತ್ರವಲ್ಲ, ಅವಳು ನನ್ನ ಸೋದರತ್ತೆಯ ಒಬ್ಬಳೇ ಮಗಳು, ಆದುದರಿಂದ ಬಹಳ ಅಕ್ಕರೆಯಿಂದ ಲಾಲಿಸಿ-ಪಾಲಿಸಲ್ಪಟ್ಟವಳು; ಚಿಕ್ಕಂದಿನಿಂದಲೂ ಯಾವ ತರದ ಕುಂದುಕೊರತೆಗಳನ್ನೂ ಕಾಣದೆ ಸುಖದಲ್ಲಿಯೆ ಬೆಳೆದವಳು. ಅಂತಹವಳು ಕಾಲಪ್ರವಾಹದ ಸುಳಿಯೊಳಗೆ ಸಿಲುಕಿ ಇಂತಹ ಪರಾಧೀನತೆಯೊಳಗೆ ಕೆಡಹಲ್ಪಟ್ಟಿದ್ದಳು. ಹೀಗಿರಲು, ಮೊದಲೇ ನೊಂದಿರುವ ಅವಳ ಮನಸ್ಸನ್ನು ಮತ್ತೂ ಇರಿಯುವುದು ಸರಿಯೇ? ಅದಕ್ಕಾಗಿಯೆ ನನ್ನ, ಹಾಗೂ ನನ್ನ ಒಡವೆ ವಸ್ತುಗಳ ಮೇಲಿನ ಅವಳ ಸ್ವೇಚ್ಛಾಪ್ರವೃತ್ತಿಯನ್ನು ನಾನು ಸ್ವಲ್ಪವಾದರೂ ತಡೆಗಟ್ಟದೆ ಇದ್ದೆನು.

ಸುಶೀಲೆ ಈ ಹೊಸ ರೀತಿಯ ಜೀವನವನ್ನು ಕೈಕೊಂಡು ಮೂರು ತಿಂಗಳಾಯಿತು. ಇಷ್ಟರಲ್ಲಿಯೆ ಅವಳು ತನ್ನ ದಾರುಣವಾದ ದುಃಖವನ್ನು ಪೂರ್ತಿಯಾಗಿ ಎಂಬಂತೆ ಮರೆತಳು. ಬರು

ವಾಗ ಅವಳ ಮುಖದ ಮೇಲೆ ಕವಿದಿದ್ದ ಚಿಂತೆಯ ಮೋಡವು ಈಗ ಪೂರಾ ಮರೆಯಾಗಿ, ಅವಳು ಯಾವಾಗಲೂ ಮಂದಹಾಸ ದಿಂದ ಕೂಡಿ ಇರತೊಡಗಿದಳು; ಈಗ ಅವಳು ತನ್ನ ಮೊದಲಿನ ಮೌನ ವನ್ನು ನೀಗಿ, ಇಡೀ ದಿನ ಪದಗಳನ್ನು ಹಾಡುತ್ತ, ಇಲ್ಲವೆ, ಹಾರ್ಮೋನಿಯಮ್ ಅಥವಾ ಫಿಡ್ಲ್ ಬಾರಿಸುತ್ತ, ವಸಂತಕಾಲದ ಪಕ್ಷಿಯಂತೆ, ಸಂತುಷ್ಟಚಿತ್ತಳಾಗಿ ಇರಹತ್ತಿದಳು. ಪಾಠ ಕಲಿಯು ವುದು, ಚಿತ್ರ ಬರೆಯುವುದು, ಕಸೂತಿ ಬಿಡಿಸುವುದು ಮುಂತಾದು ದರಲ್ಲಿ, ಅವಳು ಮೊದಲು ತೋರಿಸುತಿದ್ದ ಉದಾಸೀನತೆಯು ಈಗ ಅವಳನ್ನು ಬಿಟ್ಟುಹೋಗಿ, ಚುರುಕು ಒಡಮೂಡಿತು. ನನ್ನೊಂದಿಗೆ ಮಾತಾಡುವಾಗ, ಮೊದಲೇನಾದರೂ ಒಂದಿಷ್ಟು ದಾಕ್ಷಿಣ್ಯ ಇಲ್ಲವೆ ಸಂಕೋಚ ಪಡುತಿದ್ದಳಾದರೆ, ಈಗ ಅದರ ಗೊಡವೆಯೆ ಇರದೆ ತೀರ ಸಲಿಗೆಯಿಂದ ವರ್ತಿಸತೊಡಗಿದಳು.

* * * *

ನಾನು ತಿರುಗಾಟಕ್ಕೆ ಹೊರಡುವೆನು.

"ಎಲ್ಲಿಗೆ, ಮನೂ?" ಸುಶೀಲೆಯ ಸವಾಲು.

"ಎಲ್ಲಿಗೂ ಇಲ್ಲ. ಹೀಗೆಯೆ ಸುತ್ತಾಡಿಕೊಂಡು ಬರುವ, ಎಂದಿದ್ದೆ," ನನ್ನ ಜವಾಬು.

"ನಾನೂ ಬರುತ್ತೇನೆ. ನಡಿ, 'ಸುಲ್ತಾನ್ [redacted]'ಗೆ ಹೋಗುವ," ಸುಶೀಲೆಯ ಅಪ್ಪಣೆ.

ಸರಿಹೋಯಿತು! 'ಸುಲ್ತಾನ್ [redacted]ನ್ನು ಸಾವಿರಾರು ಸಲ ಪುಡಿ ಮಾಡಿರುವೆನಾದರೂ, ತಿರುಗಿ ನಾನು ಅಲ್ಲಿಗೇ ಅವಳನ್ನು ಅನುಸರಿಸುವೆನು.

ನಾನು ಸಿನೆಮಕ್ಕೆ ಹೊರಡುವೆನು.

"ಮನೂ! ಸಿನೆಮಕ್ಕೆ ಹೊರಟೆಯಾ?" ಸುಶೀಲೆ ಕೊರಳನ್ನು ಕೊಂಕಿಸುತ್ತ ಕೇಳುವಳು.

"ಹೌದು," ನಾನು ಶಂಕಿಸುತ್ತ ಎನ್ನುವೆನು.

"ಹೋಗುವ, ನಡಿ. 'ದೌಲತ್' ಎರಡನೆ ವಾರಕ್ಕೂ ಹರಡಿರುವುದನ್ನು ಕೇಳಿ ಅದನ್ನು ನೋಡಬೇಕೆಂದಿದ್ದೆ!" ಸುಶೀಲೆ ನನ್ನನ್ನು ಉಭಯಸಂಕಟಕ್ಕೆ ಗುರಿಮಾಡುವಳು.

ನಾನು 'ಹೂಪೀ' (Whoopee) ಸಂದರ್ಶಿಸಬೇಕೆಂದಿರುವೆನು; ಅದೂ ಆ ದಿನ ಕಡೆಯ ಪ್ರದರ್ಶನ.

ಆಯಿತು, ನನ್ನ ಆಸೆಗೆ ಸಮಾಧಿ! ನಾನು ಸುಶೀಲೆಯ ಹಿಂದೆ.

೨

ಸುಶೀಲೆಯ ಬಾಲಿಕಾಸುಲಭವಾದ ವರ್ತನವು ದಿನ ಹೋದಂತೆ ನನಗೆ ದೊಡ್ಡ ಬಾಧೆಯಾಗಿ ಬೋಧೆಯಾಗತೊಡಗಿತು. ಅವಳ ಪ್ರತಿಯೊಂದು ಆಚರಣೆಯೂ ನನಗೆ ತುಂಬ ಬೇಸರ ಉಂಟುಮಾಡುತ್ತಬಂತು; ಕೊನೆಗೆ ಅದೆಲ್ಲವನ್ನೂ ಸ್ವಲ್ಪವೂ ತಡೆಯಲಾರದಾದೆನು. ಕ್ರಮೇಣ, ಅವಳು ಬರುವ ಮುಂಚೆ ನನಗಿದ್ದ ಸ್ವಾತಂತ್ರ್ಯದ ನೆನಪು ಆಗಿಂದಾಗ ಆಗಹತ್ತಿತು; ಕಡೆಗೆ ನಾನು ಆ ಸ್ವಾತಂತ್ರ್ಯಕ್ಕಾಗಿ ಬಹಳ ಬಯಸಿದೆನು. ಆದರೆ ಅದನ್ನು ಹಿಂದೆ ಪಡೆಯುವುದಾದರೂ ಹೇಗೆ?—ಇದು ಒಂದು ದೊಡ್ಡ ಸಮಸ್ಯೆಯಾಗಿ ನನ್ನ ಮುಂದೆ ನಿಂತಿತು.

ಬರುಬರುತ್ತ, ನನಗೆ ತಿಳಿಯದಂತೆಯೆ, ನಾನು ಸುಶೀಲೆಯ ಕಡೆಯ ನನ್ನ ನಡವಳಿಕೆಗಳಲ್ಲಿ ಅಸಡ್ಡೆಯನ್ನು ತೋರಿಸಲು ಮೊದಲುಮಾಡಿದೆನು.

* * * *

ನಾನು ಕಾಲೇಜಿಗೆ ಹೋಗುವಾಗ ಸುಶೀಲೆ ನನ್ನನ್ನು ಅಡ್ಡ ಕಟ್ಟುವಳು.

"ಮನೂ! ಬರುವಾಗ ನನಗೆ ಆ ಕಾದಂಬರಿಯನ್ನು ತಂದು ಕೊಡಲಾರಿಯಾ?" ಅವಳು ಕೇಳುವಳು.

"ಆಗಬಹುದು," ನಾನು ಒಪ್ಪುವೆನು.

ನಾನು ಹಿಂದೆ ಬರುವಾಗ ಸುಶೀಲೆ ಅದಕ್ಕಾಗಿ ಕಾದಿರುವಳು.

"ತಂದಿಯಾ, ಮನೂ?" ಅವಳು ಆತುರದಿಂದ ಕೇಳುವಳು.

"ನನಗೆ ಮರೆತುಹೋಯಿತು, ಸುಶೀ!" ನಾನು ಅವಳ ಮುಖದ ಕಡೆಗೆ ನೋಡದೆ ಎನ್ನುವೆನು.

"ಚಿಂತೆ ಇಲ್ಲ, ನಾಳೆ ನೆನಪಿರಲಿ!" ಅವಳು ಸಂತವಿಸಿ ಎಚ್ಚರ ಕೊಡುವಳು.

"ಇವಳ ರಗಳೆ ನಾಳೆಗೂ ಬಾಕಿಯೇ?" ನಾನು ಒಳಗಿಂದೊಳಗೆ ಕುದಿಯುತ್ತ ನನ್ನ ಕೋಣೆಗೆ ಹೋಗುವೆನು.

ಕಡೆಗೆ ಅವಳ ಉಪಟಳದಿಂದ ತಪ್ಪಿಸಿಕೊಳ್ಳಲೆಂದು ಅದನ್ನು ತಂದುಕೊಟ್ಟೇತೀರುವೆನು.

* * * *

ಹೀಗೆಯೆ ಎಷ್ಟೋ ಸಲ ಆಗುವುದು; ಎಷ್ಟೋ ಸಂಗತಿಗಳಲ್ಲಿ ಆಗುವುದು.

ನನ್ನ ಈ ಅಸಡ್ಡೆಯು ಮನಃಪೂರ್ವಕವಾದುದು ಎಂಬುದು ಸುಶೀಲೆಯ ಲಕ್ಷ್ಯಕ್ಕೆ ಬಾರದಿರುವುದಾದರೂ ಹೇಗೆ? ಅದರ ಕಾರಣವಾದರೂ ಅವಳ ಊಹನಾಶಕ್ತಿಗೆ ಎಟಕಿತ್ತೇ, ಇಲ್ಲವೇ, ನಾನರಿಯೆ. ಆದರೆ, ಇದಿಷ್ಟು ಮಾತ್ರ ಖಂಡಿತವಾಗಿ ಹೇಳಬಲ್ಲೆನು. ಸುಶೀಲೆಯ ಮನಸ್ಸಂತೂ ಅದರಿಂದ ತೀರ ಬದಲಾವಣೆಹೊಂದಿತು. ಪರಿಣಾಮವಾಗಿ, ಅವಳು ತನ್ನ ಕಿರುಕುಳಗಳನ್ನು ಬಹಳಮಟ್ಟಿಗೆ ಕಡಿಮೆ ಮಾಡಿದಳು.

ತೋರಿಕೆಗೆ ಇದರಿಂದ ನನಗೆ ಬಹಳ ಸಮಾಧಾನವಾಯಿ ತಾದರೂ ನನ್ನ ಹೃದಯ ಮಾತ್ರ ಅದೇನೊ ಕಳವಳಿಸತೊಡಗಿತು. ಆದರೆ ನಾನು ಅದಕ್ಕೆ ಏನು ಮಾಡಲಿ?—ನನಗೆ ಬೇಕಾದುದು ನನ್ನ ವೈಯುಕ್ತಿಕ ಸ್ವಾತಂತ್ರ್ಯ; ಅದನ್ನು ಕಳೆದುಕೊಂಡರೆ ಏನುತಾನೆ ಮಾಡಲಾದೀತು?

ನಾನು ನನ್ನ ಕ್ರಮವನ್ನು ಬದಲಾಯಿಸಿದ ಕೆಲವು ದಿನಗಳೊಳ ಗೆಯೆ ಸುಶೀಲೆಯ ರೀತಿಯೂ ವಿಶೇಷ ಮಾರ್ಪಟ್ಟಿತು. ಮೊದಲು ಅವಳ ಮುಖದ ಮೇಲೆ ಹುಡುಗಿಯರಿಗೆ ಸಹಜವಾದ ಸರಳತೆ ಇತ್ತು; ಈಗ ಅದರ ಸ್ಥಾನವನ್ನು ಒಂದು ವಿಧದ ಗಾಂಭೀರ್ಯವು ಆಕ್ರಮಿಸಿತು. ಹಿಂದೆ ಅವಳ ಮಾತುಗಳು ಸಲಿಗೆಯಿಂದ ಕೂಡಿ ದ್ದುವು; ಈಗ ಅವುಗಳ ಮೇಲೆ ಲಜ್ಜೆಯು ತನ್ನ ಅಧಿಕಾರವನ್ನು ತೋರತೊಡಗಿತು. ಇದನ್ನೆಲ್ಲ ನೋಡಿ, ಸುಶೀಲೆ ನನ್ನ ವರ್ತನ ದಿಂದ ಮನನೊಂದಿದ್ದಳೆಂದು ಎಣಿಸಿದೆನು; ಹಾಗೆ ಎಣಿಸದಿರಲು ಎಡೆಯಾದರೂ ಎಲ್ಲಿಯದು? ಆದರೆ, ಈವರೆಗೆ ಸಾಕಷ್ಟು ಆತ್ಮಯಜ್ಞ ಮಾಡಿರುವೆನು; ಇನ್ನು ನಾನು ಉಪಾಯವಿಲ್ಲದವನೇ ಸರಿ,— ಎಂಬುದೇ ಆಗಿನ ನನ್ನ ಸಮಾಧಾನ.

ಆದರೂ ಸುಶೀಲೆ ನನ್ನ ಒಡವೆಗಳ ಮೇಲೆ ತನ್ನ ಆಳ್ವಿಕೆ ಯನ್ನು ಮೊದಲಿನಂತೆಯೆ ನಡೆಸುತ್ತಿದ್ದಳು; ನನ್ನಿಂದ ಮೊದಲಿ ನಂತೆಯೆ ಪಾಠಗಳನ್ನೂ ಹೇಳಿಸಿಕೊಳ್ಳುತ್ತಿದ್ದಳು; ತನ್ನ ಇತರ ಬಿಟ್ಟಿ ಗಳನ್ನೂ ಮೊದಲಿನಂತೆಯೆ ಮಾಡಿಸಿಕೊಳ್ಳುತ್ತಿದ್ದಳು. ಮಾತ್ರ, ಅವೆಲ್ಲದರಲ್ಲಿಯೂ ಮುಂಚೆ ತೋರದಿದ್ದ ಒಂದು ಬಗೆಯ ಗಾಂಭೀ ರ್ಯ ಇಲ್ಲವೆ ದಾಕ್ಷಿಣ್ಯ ಈಗ ಕಾಣಿಸಿಕೊಳ್ಳುತ್ತಿತ್ತು. ನನಗೆ ಇವೆಲ್ಲ ಸೈರಿಸಲಸದಳವಾಯಿತು; ಇದರಿಂದ ಹೇಗೆ ವಿಮೋಚನೆ ಹೊಂದುವುದು?—ಈ ಯೋಚನೆ ನನ್ನನ್ನು ಹಗಲೂ ಇರುಳೂ ಕಾಡತೊಡಗಿತು.

೩

"ಮನೋಹರ! ನೀನು ಸುಶೀಲೆಯನ್ನು ಮದುವೆಯಾಗಬೇಕು," ಒಂದು ದಿನ ತಂದೆಯವರು ಆಕಸ್ಮಿಕವಾಗಿ ನನಗೆ ಅಪ್ಪಣೆ ಕೊಟ್ಟರು.

ಕಾದ ಕಾವಲಿಯಿಂದ ಉರಿಯುವ ಒಲೆಗೆ ಬಿದ್ದಂತಾಯಿತು, ನನಗೆ; ನಾನು ತೀರ ಹುಚ್ಚನಾದೆನು. ಸುಶೀಲೆ ನನ್ನ ಐಹಿಕ ಸ್ವಾತಂತ್ರ್ಯವನ್ನು ಸೆಳೆದುಕೊಂಡುದರಲ್ಲಿ ತೃಪ್ತಿಹೊಂದಿಲ್ಲವೇ?— ಇದೀಗ ನನ್ನ ಪಾರಮಾರ್ಥಿಕ ಸ್ವಾತಂತ್ರ್ಯಕ್ಕೂ ಕೈಯೊಡ್ಡುವಷ್ಟು ಧಿಟ್ಟಳಾದಳೇ? ಇವಳ ಪೀಡೆ ಇಷ್ಟಕ್ಕೂ ಬಂತೇ?

ಯುಕ್ತವೇನು, ಅಯುಕ್ತವೇನು?- ಎಂಬುದರ ತಿಳಿವೇ ನನ್ನನ್ನು ಬಿಟ್ಟು ತೊಲಗಿತು.

"ನಾನೊಲ್ಲೆ, ಅಪ್ಪ!" ಎತ್ತಿದ ಬಾಯಿಗೇ ದುಡುಕಿ ಹೇಳಿಬಿಟ್ಟೆನು. ಅದರಿಂದ ಸುಶೀಲೆಯ ಉದ್ದೇಶಸಾಧನೆಗೆ ಆತಂಕ ತಂದೆನೆಂಬ ಗರ್ವದಿಂದ ಒಂದು ತರದ ಸಂತೋಷವನ್ನೂ ಅನುಭವಿಸಿದೆನು.

ಆದರೆ ನನ್ನ ಗರ್ವವು ಹೆಚ್ಚು ಹೊತ್ತು ಬಾಳಲಿಲ್ಲ; ಅಪ್ಪ ನನ್ನ ಮಾತನ್ನು ಕೇಳಿ ಆಶ್ಚರ್ಯಪಟ್ಟರು; ಕಾರಣ: ಈವರೆಗೆ ಎಂತಹ ವಿಷಯದಲ್ಲಿಯಾದರೂ ನಾನು ಅವರ ಇಚ್ಛೆಯನ್ನು ಮೀರಿಹೋಗಿರಲಿಲ್ಲ.

"ಅದೇನೋ, ಮನೂ, ಹಾಗೆನ್ನುವಿ?" ಅವರು ದಿಗಿಲಿನಿಂದ ಕೇಳಿದರು.

ಎಂತಹ ಕಾರಣವನ್ನು ಕೊಡಲಿ?

"ನಾನು ಸ್ವತಂತ್ರನಾಗಿಯೆ ಇರಬಯಸುತ್ತೇನೆ, ಅಪ್ಪ!" ನನ್ನ ಬಾಯಿಯಿಂದ ಹೇಗೋ ಹೊರಟಿತು.

ಅವರು ರೇಗಿ, ಉರಿದುಬಿದ್ದರು.

"ಮನೋಹರ! ನಿನ್ನ ಮಾತಿಗೆ ಅರ್ಥವಿಲ್ಲ. ನಿನ್ನ ಬುದ್ಧಿಯು ನಿನ್ನನ್ನು ಬಿಟ್ಟುಹೋದಂತಿದೆ. ನಿನಗೆ ನನ್ನಲ್ಲಿ ಇರಬೇಕೆಂಬ ಆಸೆಯಿದ್ದರೆ ನೀನು ಸುಶೀಲೆಯನ್ನು ಮದುವೆಯಾಗಲೇಬೇಕು, ತಿಳಿಯಿತೇ? ಇದೇ ನನ್ನ ಕೊನೆಯ ಮಾತು. ಚೆನ್ನಾಗಿ ಆಲೋಚಿಸಿ ಸಾವಕಾಶವಾಗಿ ಉತ್ತರ ಕೊಡು!" ಅವರು ನನ್ನನ್ನು ಗದರಿಸಿ ತನ್ನ ಮುಂದಿನಿಂದ ಕಳುಹಿಸಿಬಿಟ್ಟರು.

* * * *

ನನಗೆ ಉರಿಯುವ ಗಾಯಕ್ಕೆ ಉಪ್ಪು ಹಾಕಿದಂತಾಯಿತು. ನಾನು ಕೋಪದಿಂದಲೂ ದುಃಖದಿಂದಲೂ ದಿಗ್ಭ್ರಾಂತನಾಗಿ ಅಲ್ಲಿಂದ ನೆಟ್ಟಗೆ ನನ್ನ ಕೋಣೆಗೆ ಬಂದೆನು.

"ನನ್ನಲ್ಲಿ ಇರಬೇಕೆಂಬ ಆಸೆಯಿದ್ದರೆ...." ಎಂಬ ಈ ಮಾತು ನನ್ನ ಗರ್ವಿತ ಅಂತಃಕರಣವನ್ನು ತಿರುತಿರುಗಿ ಚುಚ್ಚುತ್ತಿರುವಂತೆ ಕಂಡಿತು; ಇದರಿಂದ ನನ್ನ ಹಟಮಾರಿತನವು ಮತ್ತಷ್ಟು ಬಲಗೊಂಡಿತು.

"ನನಗೆ ಬೇಕಾದುದು ನನ್ನ ಸ್ವಾತಂತ್ರ್ಯ. ಅದನ್ನು ನಾನು ಎಷ್ಟು ಮಾತ್ರಕ್ಕೂ ಕಳೆದುಕೊಳ್ಳಲಾರೆ. ಆಗುವುದಾಗಲಿ, ಇದಿಷ್ಟು ಖಂಡಿತ!" ನಾನು ನಿರ್ಧಾರ ಮಾಡಿದೆನು.

ನಿಶಿಯ ನೀರವದಲ್ಲಿ, ಕೊಠಡಿಯ ಪ್ರಗಾಢಶಾಂತತೆಯಲ್ಲಿ, ಒಬ್ಬಂಟಿಗನಾಗಿ ಒರಗುಕುರ್ಚಿಯಲ್ಲಿ ಕುಳಿತಿದ್ದೆನು. ಆಗ ನನ್ನ ಯೋಚನೆಗಳು ಒಂದೊಂದಾಗಿ ಸುಶೀಲೆಯ ಕಡೆಗೆ ಹರಿಯತೊಡಗಿದುವು. ಅವಳು ಬಂದ ದಿನದಿಂದಲೂ ಹೇಗೆ ಒಂದೊಂದೇ ವಿಷಯ

ದಲ್ಲಿನ ನನ್ನ ಸ್ವಾತಂತ್ರ್ಯವನ್ನು ಅಪಹರಿಸಿದ್ದಳು?—ಎಂಬುದು ಅನುಕ್ರಮವಾಗಿ ನನ್ನ ಮನಸ್ಸಿನ ಪಟದ ಮೇಲೆ ಬಂತು, ಹೋಯಿತು, ಬಂತು, ಹೋಯಿತು, ಚಲಚ್ಚಿತ್ರದಂತೆ.

"ಮೊದಲು ನಿರ್ಬಂಧವಿಲ್ಲದ ಸ್ವತಂತ್ರವೃತ್ತಿಯಲ್ಲಿ ಓಡಾಡಿ ಕೊಂಡಿರುತ್ತಿದ್ದ ನನ್ನ ಇಂದಿನ ಈ ದುರವಸ್ಥೆಗೆ ಕಾರಣರು ಯಾರು?" ಎಂಬ ಪ್ರಶ್ನೆ ಮೂಡಿತು.

"ಸುಶೀಲೆ!" "ಸುಶೀಲೆ!" "ಸುಶೀಲೆ!"—ಈ ಉತ್ತರವೇ ಪ್ರತಿಯೊಂದು ಕಡೆಯಿಂದಲೂ ಪ್ರತಿಧ್ವನಿಸತೊಡಗಿತು.

ಬಹಳ ಸಮಯ ಯೋಚಿಸಿದೆನು.

ಯೋಚನೆ! ಯೋಚನೆ! ಯೋಚನೆ!

ಕಡೆಗೆ ಮನೆ ಬಿಟ್ಟು ಹೋಗುವುದೇ ನನಗೆ ಉಳಿದುದೆಂದು ನಿಶ್ಚಯವಾಯಿತು. ಮರುದಿನವೇ ಹಾಗೆ ಮಾಡುವೆನೆಂದೂ ಸಿದ್ಧಾರ್ಥರಮಾಡಿದೆನು.

"ಸುಶೀ, ಇಗೋ, ನನಗೆ ನಿನ್ನಿಂದ ಒದಗಿರುವ ಈ ದುರ್ದಶೆ ಯನ್ನು ನೋಡಿ ಸಂತೋಷ ಪಡು!" ಎಂದು ಸುಶೀಲೆಯನ್ನು ಹಂಗಿ ಸಿಯೆ ಹೋಗಬೇಕೆಂದೂ ಎನಿಸಿತು.

ತಿರುಗಿ ಯೋಚನೆ! ಯೋಚನೆ! ಯೋಚನೆ!

ರಾತ್ರಿ ಎಷ್ಟು ಸಮಯವಾದರೂ ಕಣ್ಣಿಗೆ ಕಣ್ಣು ಹತ್ತಲೆ ಇಲ್ಲ.

೪

ಮರುದಿನ ಬೆಳಿಗ್ಗೆ ಹಾಸಿಗೆಯಿಂದ ಎದ್ದು ಹೊರಗೆ ಹೋಗು ವಾಗ ಸುಶೀಲೆ ನನಗೆ ಎದುರಾದಳು. ಅವಳ ಮುಖ ಬಾಡಿ ಬಿಳಿಚಿಹೋಗಿತ್ತು; ತುಟಿಗಳ ಮೇಲೆ ನಲಿದಾಡುತಿದ್ದ ಮುಗುಳು ನಗು ಪೂರಾ ಮರೆಯಾಗಿತ್ತು; ಕಣ್ಣುಗಳು ಬಹಳ ಭಾರವಾಗಿ

ದ್ದುವು. ಅವಳ ಕಡೆಗೆ ಬೀರಿದ ಒಂದೇ ಕಡೆಗಣ್ಣೋಟವು ಇದನ್ನೆಲ್ಲ ನನ್ನ ಲಕ್ಷ್ಯಕ್ಕೆ ತಂದಿತು.

ನನ್ನನ್ನು ನೋಡುತ್ತಲೇ ಸುಶೀಲೆ ಮುಖವನ್ನು ಆಚೆಗೆ ತಿರುಗಿಸಿ ಬೇರೆ ಕಡೆಗೆ ಹೊರಟುಹೋದಳು. ಇದನ್ನು ನೋಡುತ್ತಲೇ ನನ್ನ ಎದೆಯಲ್ಲಿ ಹರಿತವಾದ ಅಲಗಿನಿಂದ ತಿವಿದಂತಾಯಿತು; ಅಲ್ಲದೆ ಅವಳೊಂದಿಗೆ ಹೇಳಬೇಕೆಂದಿದ್ದ ಮಾತುಗಳು ಗಲಿಬಿಲಿಯಲ್ಲಿ ಚೆದರಿ ದಿಕ್ಕಾಪಾಲಾಗಿ ಓಡಿಬಿಟ್ಟುವು. ನನ್ನ ಮನಸ್ಸು ಚಂಚಲವಾಯಿತು; ನಾನು ಇನ್ನೊಮ್ಮೆ ಯೋಚನೆಯಲ್ಲಿ ಮಗ್ನನಾದೆನು.

ಮರಳಿ ಯೋಚನೆ! ಯೋಚನೆ! ತಲೆ ತುಂಬ ಯೋಚನೆ!

ಆ ದಿನ ನಾನು ಕೊಲೇಜಿಗೆ ಹೋಗಲಿಲ್ಲ. ಇಡೀ ದಿನ ನನ್ನ ಕೊಠಡಿಯಲ್ಲಿಯೆ ಕುಳಿತು ಎಷ್ಟೋ ಯೋಚಿಸಿದೆನು; ಆದರೂ ಎಂತಹ ನಿರ್ಧಾರಕ್ಕೂ ಬಾರದಾದೆನು. ಕಡೆಗೆ ಮಧ್ಯಾಹ್ನದ ಮೇಲೆ ೪ ಘಂಟೆಯಾಗುತ್ತಲೇ ಫಲಾಹಾರ ಮುಗಿಸಿ ತಿರುಗಾಟಕ್ಕೆ ಹೋದೆನು. ಆದರೆ ಸಂಜೆ ಮನೆಗೆ ಹಿಂದಿರುಗುತ್ತಲೇ ಅಲ್ಲಿ ಕಾದಿದ್ದ ವಾರ್ತೆಯು ನನ್ನ ಮನಸ್ಸಿನ ಮೇಲೆ ವಿಶೇಷ ಪರಿಣಾಮಕಾರಿಯಾಯಿತು:

ಕೋಣೆಯನ್ನು ಹೊಗುತ್ತಲೇ ನನ್ನ ಲಕ್ಷ್ಯವು ಮೇಜಿನ ಮೇಲೆ ಇದ್ದ ಒಂದು ಲಕೋಟೆಯ ಕಡೆಗೆ ಹೋಯಿತು. ಅಂಗಿ ಟೊಪ್ಪಿಗಳನ್ನು ಕಳಚುವ ಮುಂಚೆಯೆ ಅದನ್ನು ಲಗುಬಗೆಯಿಂದ ಎತ್ತಿ ನೋಡಿದೆನು. ಅದರ ಮೇಲೆ, ನನಗೆ ಚಿರಪರಿಚಿತವಾದ ಸುಶೀಲೆಯ ಕೈಬರಹದಲ್ಲಿಯೆ ನನ್ನ ಹೆಸರು ಬರೆಯಲ್ಪಟ್ಟಿತ್ತು. ಅವಸರ ಅವಸರವಾಗಿ ಲಕೋಟೆಯನ್ನು ತೆರೆದು ಒಳಗಿನ ಕಾಗದವನ್ನು ನಡುಗುವ ಬೆರಳುಗಳಿಂದ ಹೊರತೆಗೆದೆನು. ಎದೆಯು ಡಬಡಬನೆ ಬಡಿಯುತ್ತಿರಲು, ಅದರ ಒಕ್ಕಣೆಯನ್ನು ಓದಿನೋಡಿದೆನು:

"ಮನೋಹರ,

ನಿನ್ನಿಂದ ನಾನು ಎಷ್ಟು ಉಪಕಾರ ಹೊಂದಿದ್ದೇನೆ! ನಿನ್ನ ಸಂಗಡ ಎಷ್ಟು ಸುಖದ ದಿನಗಳನ್ನು ಕಳೆದಿದ್ದೇನೆ! ಅದನ್ನೆಲ್ಲ ನಾನು ಎಂದೂ ಮರೆಯಲಾರೆ.

ನನ್ನಿಂದಾಗಿ ನೀನು ಕಷ್ಟಕ್ಕೆ ಗುರಿಪಡುವಂತಿದೆ. ಅದನ್ನು ತಪ್ಪಿಸಲು ನಾನು ಈಹೊತ್ತೇ ದೊಡ್ಡಮಾಮನಲ್ಲಿಗೆ ಹೋಗುತ್ತೇನೆ. ನಿನ್ನ ಸುಖವೇ ನನ್ನ ಸುಖವೆಂದು ತಿಳಿದು ಹೀಗೆ ಮಾಡುತಿದ್ದೇನೆ. ನನ್ನಿಂದ ಎಂತಹ ತಪ್ಪಾಗಿದ್ದರೂ ಕ್ಷಮಿಸು.

ಇಂತಿ,

**ಸುಶೀಲೆ"**

ಮೇಲಿನ ಪ್ರತಿಯೊಂದು ಮಾತೂ ನನ್ನ ಹೃದಯಕ್ಕೆ ಈಟಿಯಂತೆ ನಾಟಿತು. ಆದರೂ ನನ್ನ ಛಲವೇ ಮೇಲಾಯಿತಲ್ಲವೇ?—ಈ ಕಲ್ಪನೆಯಿಂದ ಒಂದು ನಿಟ್ಟುಸಿರು ಬಿಟ್ಟು ಆತ್ಮಸಮಾಧಾನ ಹೊಂದಿದೆನು. ಆ ರಾತ್ರಿ ನನಗೆ ಊಟವೂ ರುಚಿಸಿತು, ಅಲ್ಲದೆ, ನಿದ್ದೆಯೂ ಚೆನ್ನಾಗಿ ಹಿಡಿಯಿತು.

೫

ಸುಶೀಲೆ ಹೊರಟುಹೋದ ಮೇಲೆ ನನ್ನ ಹಿಂದಿನ ಸ್ವಾತಂತ್ರ್ಯವು ನನಗೆ ಮರಳಿ ದೊರೆತು ನಾನು ಮುಂಚಿನಂತೆಯೆ ಸುಖಿಯಾಗುವೆನೆಂದು ಎಣಿಸಿದ್ದೆನು. ಹಿಂದಿನ ಸ್ವಾತಂತ್ರ್ಯವೇನೋ ತಿರುಗಿ ದೊರೆಯಿತು; ಆದರೆ ಅಂದಿನ ಸುಖ?—ಅದು ಎಲ್ಲಿಗೋ ಮಾಯವಾಗಿತ್ತು.

ಸುಶೀಲೆ ಹೋದಂದಿನಿಂದಲೂ ನನ್ನ ಮನಶ್ಶಾಂತಿಯು ಅದೇಕೋ ಮತ್ತಷ್ಟು ದೂರವಾಯಿತು: ಅವಳು ಇರುವಾಗ ಮನೆಯು ಯಾವಾಗಲೂ ಗಾಯನದಿಂದಲೂ ವಾದನದಿಂದಲೂ

ತುಂಬಿರುತಿತ್ತು; ಈಗ ಅದು ಮಸಣದಷ್ಟು ಮೌನವಾಗಿ ತೋರ ತೊಡಗಿತು. ಅದರಲ್ಲಿ ಎಲ್ಲಿ ನೋಡಿದರೂ ಅವಳ ಲಾವಣ್ಯ ತುಂಬಿದ ಮುಖಕಮಲವು ಮುಗುಳುನಗುವಿನಿಂದ ಪ್ರಫುಲ್ಲವಾಗಿ ಕಾಣಿಸುತಿತ್ತು; ಈಗ ಅದು ಮರೆಯಾದುದರಿಂದ ಅದರ ಸ್ಮರಣೆಯು ಕ್ಷಣಕ್ಷಣವೂ ಆಗತೊಡಗಿತು. ಪಾಠಗಳನ್ನು ಓದಲು ಕುಳಿತಾಗ ಅವಳು ನಡುನಡುವೆ ತನ್ನ ಇಂಪಾದ ಮೆಲ್ನುಡಿಗಳಿಂದ ಓದಿನೊಳ ಗಿನ ಶುಷ್ಕತೆಯನ್ನು ನೀಗಿಸುತಿದ್ದಳು; ಅಂತಹ ಸಂದರ್ಭಗಳಿಗಾಗಿ ನನ್ನ ಮನಸ್ಸು ಈಗ ಅತಿಯಾಗಿ ಹಾರೈಸತೊಡಗಿತು. ಅವಳಿಗೆ ಪಾಠಗಳನ್ನು ಹೇಳಿಕೊಡುತಿದ್ದಾಗ ಸಮಯವು ಮನೋವೇಗದಿಂದ ಎಂಬಂತೆ ಸಾಗುತಿತ್ತು; ಈಗ ಅದು ಅತ್ಯಂತ ಭಾರವಾದ ಹೆಜ್ಜೆ ಗಳಿಂದ ಹೋಗುತ್ತಿರುವಂತೆ ಕಾಣತೊಡಗಿತು. ಇದರಿಂದೆಲ್ಲ ನನಗೆ, ಜೀವನವು ಬಹಳ ಜಡವೂ ನೀರಸವೂ ಆಗಿ ಭಾಸವಾಗಹತ್ತಿತು.

ಪರೀಕ್ಷೆಯು ಹತ್ತಿರವಾಗುತಿದ್ದುದರಿಂದ ನನ್ನ ಹೆಚ್ಚಿನ ಹೊತ್ತು ಓದುವುದರಲ್ಲಿಯೆ ಕಳೆಯುತಿತ್ತು. ಹಿಂದೆ ಒಂದೇ ಸಲ ಓದಿದರೆ ಪಾಠಗಳು ಮನದಟ್ಟಾಗುತಿದ್ದುವು; ಆದರೆ ಈಗ ಎರಡು ಮೂರು ಸಲ ಓದಿದರೂ ಪ್ರಯೋಜನವಾಗುತಿರಲಿಲ್ಲ. ಪುಸ್ತಕದಲ್ಲಿ ಎಲ್ಲಿ ನೋಡಿದರೂ ಸುಶೀಲೆಯ ಮುಖವೇ,--ಹೊರಟು ಹೋ ದಂದಿನ ಅವಳ ಬಾಡಿ ಬಿಳುಪೇರಿದ ಆ ಮುಖವೇ.

ಅವಳ ಹಿಂದಿನ ಮುಖಭಾವವೇನು, ಅಂದಿನ ಮುಖಭಾವ ವೇನು! ಅವೆರಡಕ್ಕೂ ಎಂತಹ ಅಂತರ! ಒಂದು ಹಗಲು, ಒಂದು ಇರುಳು! ಇದಕ್ಕೆ ಕಾರಣರಾದರೂ ಯಾರು?—ನಾನೇ ಅಲ್ಲವೇ? ಇದನ್ನು ಎಣಿಸುತ್ತಲೇ ನನ್ನ ಮನಸ್ಸು ಮಿತಿಯಿಲ್ಲದ ತಳಮಳಕ್ಕೆ ತುತ್ತಾಗತೊಡಗಿತು.

ಸುಶೀಲೆ ನಮ್ಮಲ್ಲಿ ಆಶ್ರಮದ ಜಿಂಕೆಮರಿಯಂತೆ ಸ್ವೇಚ್ಛೆ ಯಿಂದ ಓಡಾಡಿಕೊಂಡು ತಣಿದಿರುತಿದ್ದಳು; ಆನಂದದಿಂದ ಅರಳಿ

ಕೊಂಡು ಕುಣಿದಿರುತಿದ್ದಳು. ಅವಳ ಆ ಸಂತೋಷದ ಪಾತ್ರೆಗೆ ಈ ವಿಷವನ್ನು ಎರಚಿದುದಾದರೂ ಯಾರು? ನಾನೇ ಅಲ್ಲವೇ?— ಈ ಯೋಚನೆಯು ನನ್ನನ್ನು ನರಕಯಾತನೆಗೆ ಗುರಿಪಡಿಸಿತು.

ಆದರೆ, ಸುಶೀಲೆ ನನ್ನ ದೊಡ್ಡಪ್ಪನವರಲ್ಲಿಯಾದರೂ ಸುಖವಾಗಿರುವಳೇ?— ಇದನ್ನು ತಿಳಿದುಕೊಳ್ಳಬೇಕೆಂದು ನನಗೆ ಬಹಳ ಲವಲವಿಕೆ ಉಂಟಾಯಿತು.

ಒಂದು ದಿನ ಏನೋ ಕೆಲಸದ ಮೇಲೆ ಅವರಲ್ಲಿಗೆ ಹೋದೆನು. ಆಗ ನನಗೆ ಸುಶೀಲೆಯನ್ನು ನೋಡುವ ಸುಯೋಗವೂ ದೊರೆಯಿತು. ಅವಳು ದೊಡ್ಡಪ್ಪನ ಮಕ್ಕಳೊಂದಿಗೆ ಆಡುತ್ತ, ಮಾತಾಡುತ್ತ, ಸಂತೋಷದಿಂದ ನಗಾಡುತ್ತ ಇದ್ದುದು ನನ್ನ ಗೋಚರಕ್ಕೆ ಬಂತು.

ಸುಶೀಲೆಯೂ ನನ್ನನ್ನು ನೋಡಿದಳು; ನೋಡುತ್ತಲೇ ಅವಳ ಚೆಲುವಾದ ಮುಖವು ಒಂದು ಕರಿಯ ಮೋಡದಿಂದ ಮಾಸಿದಂತೆ ತೋರಿತು. ಅವಳು ಆ ಕ್ಷಣವೇ ಮುಖವನ್ನು ತಗ್ಗಿಸಿ ಅತ್ತ ನಡೆದು ಬಿಟ್ಟಳು.

ಅಂದು ನಾನು ನನ್ನನ್ನು ಮನಸಾರೆ ಹಳಿದುಕೊಂಡೆನು. ಅಂದಿನಿಂದಲೂ ನನ್ನ ಹೃದಯದ ವೇದನೆಯು ಎಲ್ಲೆಯರಿಯದಾಯಿತು.

೬

ತಂದೆಯವರ ಮಾತನ್ನು ಅಲ್ಲಗಳೆದ ಪಾಪದ ಫಲ ಸಿಕ್ಕಲು ಹೆಚ್ಚು ಕಾಲ ಹಿಡಿಯಲಿಲ್ಲ. ಕೆಲವು ದಿನಗಳಲ್ಲಿಯೆ ನಾನು ನನ್ನ ಹುಚ್ಚುತನವನ್ನು ಪೂರ್ತಿಯಾಗಿ ಮನಗಂಡೆನು.

ಎಲ್ಲೆಲ್ಲಿ ಹೋದೆನು; ಏನೇನು ಗೈದೆನು; ಆದರೂ ಸುಶೀಲೆಯನ್ನಾಗಲಿ, ಅವಳೊಂದಿಗೆ ಕಳೆದ ಸುಖದ ದಿನಗಳನ್ನಾಗಲಿ ಮರೆಯಲು ನನ್ನಿಂದ ಎಷ್ಟು ಮಾತ್ರಕ್ಕೂ ಕೈಗೂಡದೆಹೋಯಿತು.

ದೂರದ ಬಯಲುಗಳನ್ನು ಸಾರಿ ಅಂದವಾದ ಪೈರುಪಚ್ಚೆಗಳನ್ನು ದಿಟ್ಟಿಸುತ್ತ ಕೂತೆನು; ಎತ್ತರದ ಗುಡ್ಡಗಳನ್ನು ಏರಿ ಸುತ್ತುಮುತ್ತಲಿನ ಪ್ರಕೃತಿಯ ಮನೋಹರವಾದ ದೃಶ್ಯವನ್ನು ನಿಟ್ಟಿಸುತ್ತ ನಿಂತೆನು. ಕಡಲ ತೀರಕ್ಕೆ ತೆರಳಿ ತೆರೆಗಳ ಭ್ರಾಂತವಾದ ಉರುಳುವಿಕೆಯಲ್ಲಿ ಮನನೆಟ್ಟು ತಿರುಗಿದೆನು; ಆಕಾಶದಲ್ಲಿನ ನಕ್ಷತ್ರಗಳ ಅರ್ಥಗರ್ಭಿತವಾದ ನೋಟದಲ್ಲಿ ಕಣ್ಣಿಟ್ಟು ಒರಗಿದೆನು. ಮನಸ್ಸಿನ ಶಾಂತಿಯನ್ನು ಹಿಂದೆ ಪಡೆಯಲು ಹೀಗೆಲ್ಲ ಬಹಳವಾಗಿ ಪ್ರಯತ್ನ ಮಾಡಿದೆನು. ಆದರೆ ಮನೆಗೆ ಹಿಂತೆರಳುತ್ತಲೇ ಅಲ್ಲಿನ ಪ್ರತಿಯೊಂದು ವಸ್ತುವೂ ನನ್ನ ಅಲ್ಪಕಾಲದ ಸಂಗಾತಿಯ ನೆನಪನ್ನು ಮೇಲಿಂದ ಮೇಲೆ ಮಾಡಿಕೊಟ್ಟಿತು; ಪ್ರತಿಯೊಂದು ವಸ್ತುವೂ ಅವಳ ಸಾನ್ನಿಧ್ಯದ ಹೆಬ್ಬಯಕೆಯನ್ನು ನನ್ನ ಮನಸ್ಸಿನಲ್ಲಿ ಮೊಳೆಯಿಸಿತು.

ದಿನ ಕಳೆದಂತೆ ನನ್ನ ಹೃದಯದ ಯಾತನೆಯು ಅಪರಿಮಿತವಾಯಿತು. ಮನಶ್ಶಾಂತಿಗಾಗಿ ಹಾರ್ಮೋನಿಯಮ್ ಅಥವಾ ಫಿಡ್ಲನ್ನು ಬಾರಿಸುವೆನು; ಹೃದಯದೊಳಗಿನ ವೇದನೆಯೆಲ್ಲ ನೀರಾಗಿ ಕಣ್ಣಿನಿಂದ ಧಾರೆಧಾರೆಯಾಗಿ ಸುರಿಯುವುದು. ಪದಗಳನ್ನು ಹಾಡಲೆಂದು ಕಂಠ ಎತ್ತುವೆನು; ಹೃದಯವೀಣೆಯ ತಂತಿಗಳೆಲ್ಲ ಬಿಗಿದಂತಾಗಿ ಬಾಷ್ಪಗಾನಕ್ಕೆ ಪ್ರಾರಂಭವಾಗುವುದು. ಇತರರ ಗಾಯನವು ನನ್ನ ಕಿವಿಯನ್ನು ಹೊಗುವುದು; ಮನಸ್ಸಿನ ಕೊರಗು ನೂರ್ಮಡಿಯಾಗಿ ಕಂಬನಿಯು ಮಳೆ ಕರೆಯತೊಡಗುವುದು.

ಅಶ್ರುವರ್ಷವನ್ನು ಸುರಿಸಿದೊಡನೆಯೆ ಹೃದಯವು ಒಂದು ಸಲಕ್ಕೆ ಹಗುರವಾಗುವುದು. ಆದುದರಿಂದ ಸಂಜೆ ಊರಹೊರಗಿನ ಗುಡ್ಡವನ್ನೇರಿ ಕುಳಿತು, ದುಃಖವೊಸರುವ ಒಂದೆರಡು ಪದಗಳನ್ನು ಗಟ್ಟಿಯಾಗಿ ಹಾಡುವುದು ನನ್ನ ದಿನಚರಿಯಾಯಿತು.

ಅಲ್ಲಿ ಒಂದೊಂದು ಸಲ ಸುತ್ತಲೂ ರಂಜಿಸುತ್ತಿರುವ ನೈಸರ್ಗಿಕ ದೃಶ್ಯದ ಕಡೆಗೆ ದಿಟ್ಟಿಸುತ್ತ ಹಾಡುವೆನು; ಒಂದೊಂದು ಸಲ

ದೂರದಲ್ಲಿ ಮೊರೆಯುತ್ತಿರುವ ಸಮುದ್ರದ ಕಡೆಗೆ ನೋಡುತ್ತ ಹಾಡುವೆನು; ಒಂದೊಂದು ಸಲ ಎತ್ತರದಲ್ಲಿ ಮಿನುಗುತ್ತಿರುವ ತಾರೆಗಳ ಕಡೆಗೆ ದೃಷ್ಟಿ ಬೀರುತ್ತ ಹಾಡುವೆನು. ಹಾಡಿ, ಕಣ್ಣೀರು ಮಿಡಿದು, ಎದೆಯ ಭಾರವನ್ನು ತಗ್ಗಿಸಿಕೊಳ್ಳುವೆನು.

ಆದರೆ ಮಾನವಹೃದಯವು ಬಹಳ ದುರ್ಬಲವಾದುದು; ಅದು ಎಷ್ಟು ಕಾಲ ತಾನೆ ಇಂತಹ ದಾರುಣವಾದ ವ್ಯಥೆಯನ್ನು ಸೈರಿಸಬಲ್ಲುದು? ಸಮಯ ಸರಿದಂತೆ ನನಗೆ ಸಹಿಸಲಾಗದ ಸಂಕಟ ದಿಂದ ಜೀವನವೇ ಭಾರವಾಗಿ ತೋರತೊಡಗಿತು; ಕೊನೆಗೆ ಪ್ರಪಂಚ ದಲ್ಲಿಯೆ ಜುಗುಪ್ಸೆ ಉಂಟಾಯಿತು. ನಾನು ಮರಣವನ್ನು ಮನಃ ಪೂರ್ವಕವಾಗಿ ಹಾರೈಸಿದೆನು.

ನನ್ನ ಮನಸ್ಸಿನ ಮೂಲೆಯಲ್ಲಿ ಎಲ್ಲಿಯಾದರೂ ಪ್ರಾಣದ ಮೇಲೆ ಅಲ್ಪಸ್ವಲ್ಪ ಆಸೆಯಿತ್ತೇನೊ; ಆದರೆ ಸುಶೀಲೆಗೆ ನನ್ನ ದೊಡ್ಡಪ್ಪನ ಮಗ ರಮೇಶನೊಂದಿಗೆ ಮದುವೆಯಾಗುವುದೆಂದು ಒಂದು ದಿನ ಕಿವಿಗೆ ಬೀಳುತ್ತಲೇ ನನ್ನ ಆ ಆಸೆಯೂ ತೊಲಗಿ ಬಿಟ್ಟಿತು. ಅಂದಿನಿಂದ ನಾನು ನನ್ನ ದೈನಿಕ ಚರ್ಯೆಗಳನ್ನೆಲ್ಲ ನಿರಿಚ್ಛೆಯಿಂದಲೇ ಮಾಡಹತ್ತಿದೆನು, ಯಾಂತ್ರಿಕ ಮನುಷ್ಯನಂತೆ.

ಒಂದು ದಿನ ಸಾಯಂಕಾಲ, ಜನರು ಕಿಕ್ಕಿರಿದು ತುಂಬಿದ್ದ ಒಂದು ಬೀದಿಯಲ್ಲಿ ನಡೆದುಹೋಗುತಿದ್ದೆನು; ನನ್ನ ಮನಸ್ಸು ಎಲ್ಲೆ ಲ್ಲಿಯೋ ಅಲೆದಾಡುತಿದ್ದಿತು. ಒಮ್ಮಿಂದೊಮ್ಮೆಗೆ ದೊಡ್ಡದೊಂದು ಶಬ್ದವಾಯಿತು; ಒಡನೆ ನನ್ನ ಮೇಲಿಂದ ಏನೋ ಹಾಯ್ದುಹೋದಂತೆ ತೋರಿ, ಪ್ರಪಂಚವೆಲ್ಲವೂ ಮಿಂಚಿನ ವೇಗದಲ್ಲಿ ಕಣ್ಮರೆಯಾದಂತಾ ಯಿತು. ಮತ್ತೇನಾಯಿತು ಎಂಬುದು ನನ್ನ ಸ್ಮರಣೆಯಲ್ಲಿಲ್ಲ.

೭

“ಮನೂ!” ಯಾರೋ ನಡುಗು-ದನಿಯಲ್ಲಿ ನನ್ನನ್ನು ಕರೆಯು ವಂತೆ ಕೇಳಿಸಿತು; ಸ್ವರವು ಚಿರಪರಿಚಿತವಾಗಿದ್ದಂತೆ ತೋರಿತು.

ನಾನು, ನಿದ್ದೆಯಿಂದ ಎಚ್ಚತ್ತವನಂತೆ, ಕಣ್ಣುಗಳನ್ನು ಹೊಸಗಿ ಕೊಂಡು ರೆಪ್ಪೆಗಳನ್ನು ತೆರೆದೆನು.

ಮುಂದೆ ತೋರಿದ ದೃಶ್ಯವು ನನ್ನನ್ನು, ಇದು ಕನಸೇ, ಎಚ್ಚರವೇ?—ಎಂದು ಅನುಮಾನಪಡಿಸಿತು.

"ಸುಶೀ!" ಎಂದು ನಾನು ಒಮ್ಮಿಂದೊಮ್ಮೆಗೆ ಎದ್ದುಕೂತೆನು.

ಹತ್ತಿರದಲ್ಲಿಯೆ ಅಪ್ಪನೂ ಅಮ್ಮನೂ ನಿಂತಿದ್ದರು; ಅವರ ಬಳಿಯುಲ್ಲಿಯೆ ಸುಶೀಲೆ, ಮ್ಲಾನವಾದ ಮುಖಭಾವದೊಡನೆ, ನಿಂತಿದ್ದಳು.

ನಾನು ಎದ್ದುಕೂತವನೇ ಅವಳ ಕೈಯನ್ನು ಹಿಡಿದುಕೊಂಡೆನು.

"ಸುಶೀ! ನಿಜವಾಗಿಯೂ ಸುಶೀ!" ನಾನು ಅವಳನ್ನೇ ಒಂದೇ ಸವನೆ ದುರದುರನೆ ದಿಟ್ಟಿಸಿದೆನು. ನಂಬಲಾರದೆ ದಿಟ್ಟಿಸಿದೆನು; ನಂಬಿಯೂ ದಿಟ್ಟಿಸಿದೆನು.

"ಮನೋಹರ! ಹಾಗೆಲ್ಲ ಎದ್ದುಕೂತು ದಣಿವು ಮಾಡಿಕೊಳ್ಳಬೇಡ," ಬಳಿಯುಲ್ಲಿಯೆ ನಿಂತಿದ್ದ ಡೊಕ್ಟರ್ ಮೋಹನರಾಯರು ಎಚ್ಚರಕೊಟ್ಟರು.

ನಾನು ಒಮ್ಮೆ ಅವರ ಕಡೆಗೆ ನೋಡಿ ನಸುನಕ್ಕೆನು. ಏನೋ ನೆನೆದೆನು.

"ನಾನು ಹೊರಗೆ ಮಾರ್ಗದಲ್ಲಿ ನಡೆಯುತಿದ್ದೆ; ಇದ್ದಕ್ಕಿದ್ದಂತೆಯೆ ಇಲ್ಲಿಗೆ ಹೇಗೆ ಬಂದೆ?'' ಸುಶೀಲೆಯ ಕಡೆಗೆ ತಿರುಗಿ ಕೇಳಿದೆನು.

"ಮನೂ! ಹೆಚ್ಚು ಮಾತಾಡಿದರೆ ಆಯಾಸವಾದೀತು; ಮಲಗಿಕೊ. ಅದೆಲ್ಲವನ್ನೂ ಮತ್ತೆ ಹೇಳುತ್ತೇನೆ. ನೋಡು, ನಿನ್ನ ಬಲ ಕಾಲಿಗೆ ಪೆಟ್ಟಾಗಿದೆ; ಅದನ್ನು ಅಲ್ಲಾಡಿಸಬೇಡ!" ಸುಶೀಲೆ 'ಉತ್ಸುಕತೆಯಿಂದ ಎಂದಳು.

ನಾನು ಆಶ್ಚರ್ಯದಿಂದ ಕಾಲಿನ ಕಡೆಗೆ ನೋಡಿದೆನು. ಅದನ್ನು ಬಟ್ಟೆಯಿಂದ ಕಟ್ಟಿದ್ದರು. ಈಗಾಗಲೇ ಅದು ನೋಯು ವುದಕ್ಕೂ ತೊಡಗಿತ್ತು. ನಾನು ಹಿಂದಕ್ಕೆ ಸರಿದು ಮಲಗಿಕೊಂಡೆನು.

"ಅದು ಹೇಗಾಯಿತು, ಸುಶೀ?" ನಾನು ಬೆಚ್ಚಿಬಿದ್ದು ಕೇಳಿ ದೆನು.

"ಈಹೊತ್ತು ಸಂಜೆ ನೀನು ದೊಡ್ಡಮಾವನ ಕಾರಿನ ಅಡಿ ಯಲ್ಲಿ ಬಿದ್ದಿ. ಆಗ ನಾನೂ ಆ ಕಾರಿನಲ್ಲಿದ್ದೆ. ನೀನು ಬಿದ್ದು ದನ್ನು ನೋಡುತ್ತಲೇ ಕಾರನ್ನು ನಿಲ್ಲಿಸಿ, ನಿನ್ನನ್ನು ಅದರಲ್ಲಿಯೆ ಇಲ್ಲಿಗೆ ತಂದರು. ನಾನು ನಿನ್ನ ವಿಷಯವಾಗಿ ಉತ್ಸುಕಳಾದುದ ರಿಂದ ಇಲ್ಲಿಯೆ ನಿಂತೆ. ಕಾಲು ಹೆಚ್ಚು ನೋಯುತ್ತಿದೆಯೇನು, ಮನೂ?" ಸುಶೀಲೆ ಕೇಳಿದಳು.

ನಾನು ಅದೆಲ್ಲವನ್ನೂ ವಿಸ್ಮಯದಿಂದ ಆಲಿಸಿದೆನು.

"ಇಲ್ಲ, ಸುಶೀ, ಅದು ಹೆಚ್ಚು ನೋಯುತ್ತಿಲ್ಲ; ಬೇರೆಲ್ಲಿಯೂ ನೋವಿರುವಂತೆಯೂ ಕಾಣುವುದಿಲ್ಲ," ನಾನು ಎಂದೆನು.

"ಈ ರಾತ್ರಿ, ಅಲುಗಾಡದೆ ಮಲಗಿಕೊ, ಎಂದರೆ, ಬೇಗನೆ ಗುಣ ಹೊಂದುವಿ," ಡೊಕ್ಟರರು ಜಾಗರೂಕತೆ ಹೇಳಿದರು.

ಅವರು ಅಪ್ಪನೊಡನೆ ಏನೋ ಮಾತಾಡಿ ಹೊರಟುಹೋದರು. ಅಪ್ಪನೂ ಅಮ್ಮನೂ ನನಗೆ ಒಂದೆರಡು ಎಚ್ಚರಿಕೆಯ ಮಾತು ಗಳನ್ನು ಹೇಳಿ ಹೊರಗೆ ಹೋದರು. ಸುಶೀಲೆ ನನ್ನ ಅಪೇಕ್ಷೆಯಂತೆ ನನ್ನ ಬಳಿಯಲ್ಲಿಯೆ ಕುಳಿತಳು.

* * * *

ನನಗೆ ಈಗ ಹೆಚ್ಚಿನ ಅವಕಾಶ ದೊರೆಯಿತು; ನಾನು ಸುಶೀಲೆ ಯನ್ನು ಸಾಂಗೋಪಾಂಗವಾಗಿ ದಿಟ್ಟಿಸಿನೋಡಿದೆನು. ಅವಳ ಅಂದವಾದ ಮುಖವು ಪೂರಾ ಕಳೆಗುಂದಿದ್ದು, ಚಿಂತೆಯು ಅದರ

ಮೇಲೆ ಮುದ್ರೆಯೊತ್ತಿದಂತೆ ಇತ್ತು. ಅವಳ ಕೋಮಲವಾದ ಶರೀರವು ನಮ್ಮಲ್ಲಿಂದ ಅವಳು ಹೊರಟುಹೋಗುವಾಗ ಇದ್ದಂತೆ ಇರಲಿಲ್ಲ; ಬಹಳ ಬಡವಾಗಿತ್ತು. ಅದನ್ನು ನೋಡುತ್ತಲೇ, ನಾನೇ ಅದರ ಕಾರಣನೆಂಬ ಕಲ್ಪನೆಯು ನನ್ನನ್ನು ನಡುಗುವಂತೆ ಮಾಡಿತು. ನನ್ನ ಕಣ್ಣುಗಳು ತುಂಬಿಬಂದುವು.

"ಸುಶೀ! ನನ್ನನ್ನು ಕ್ಷಮಿಸಲಾರಿಯಾ?—ನಾನು ನಿನ್ನಲ್ಲಿ ನಿಜವಾಗಿಯೂ ಎಂತಹ ದೊಡ್ಡ ತಪ್ಪನ್ನು ಮಾಡಿದೆ!" ನಾನು ಸುಶೀಲೆಯ ಕೈಯನ್ನು ಎತ್ತಿಕೊಂಡು, ಕಂಪಿಸುವ ಸ್ವರದಲ್ಲಿ ಎಂದೆನು.

"ಅದೇಕೆ, ಹಾಗೆನ್ನುವಿ, ಮನೂ? ನನಗೆ ನಿನ್ನ ಮಾತಿನ ಅರ್ಥವೇ ಆಗುವುದಿಲ್ಲ! ನೀನು ನನಗೆ ಉಪಕಾರವನ್ನೇ ಅಲ್ಲದೆ ಅಪಕಾರವನ್ನು ಈವರೆಗೆ ಮಾಡಿದ್ದು ನನ್ನ ನೆನಪಿನಲ್ಲಿಯೆ ಇಲ್ಲವಲ್ಲ!" ಸುಶೀಲೆ ತವಕದಿಂದ ಸಂತವಿಡುತ್ತ ಹೇಳಿದಳು.

ನಾನು ಸುಶೀಲೆಯ ಮನಸ್ಸಿನ ಉದಾರತೆಯನ್ನು ಈಗ ಪೂರ್ತಿಯಾಗಿ ತಿಳಿದೆನು. ಅಂತಹ ಸರಳ ಮನಸ್ಸನ್ನು ಅಳಲಿಕೆಗೆ ಗುರಿಪಡಿಸಿದ ನನ್ನ ತಪ್ಪು ನಿಜವಾಗಿಯೂ ಅಳತೆ ಮೀರಿದುದೆಂದು ನನಗೆ ಎನಿಸಿತು.

"ಸುಶೀ! ಅಂದು ನೀನು ನಮ್ಮಲ್ಲಿ ಎಷ್ಟು ಸಂತೋಷದಿಂದ ಇದ್ದಿ! ಅಂತಹ ನಿನ್ನ ಆನಂದಕ್ಕೆ ಮಣ್ಣೆರಚಿದ ಈ ಪಾಪಿಯು ತಪ್ಪುಗಾರನಲ್ಲವೇ?" ನಾನು ಮರುಗುತ್ತ ಕೇಳಿದೆನು.

"ಛೆ! ನನ್ನ ಸಂತೋಷಕ್ಕೆ ಯಾರೂ ಅಡ್ಡಬಂದಿಲ್ಲ. ನಾನು ಈಗಲೂ ಹಾಗೆಯೆ ಇದ್ದೇನಲ್ಲ, ಮನೂ?" ಅವಳು ಆತುರದಿಂದ ಎಂದಳು.

"ಆದರೆ, ನೀನೇಕೆ ಇಷ್ಟು ಬಚ್ಚಿಹೋಗಿದ್ದೀ? ಇಲ್ಲಿದ್ದಾಗ ನೀನು ಇದರ ಇಮ್ಮಡಿಯಾಗಿದ್ದಿ!"

"ಮನೂ! ನಿನ್ನ ಕಣ್ಣು ವಿಚಿತ್ರವಾಗಿರಬೇಕು! ನನಗೇನೋ ಬೇರೆ ತರವೇ ಎನಿಸುತ್ತದೆ."

"ಸುಶೀ! ನಿನ್ನ ಈ ಹೃದಯವನ್ನು ನಾನು ಅಂದೇ ತಿಳಿಯದಾದೆ; ಆದುದರಿಂದಲೇ ಇಷ್ಟಕ್ಕೆಲ್ಲ ಕಾರಣವಾಯಿತು. ಆದರೆ ನನ್ನ ತಪ್ಪಿಗಾಗಿ ನಾನು ತಕ್ಕ ಶಿಕ್ಷೆಯನ್ನು ಆಮೇಲೆ ಹೊಂದಿದೆ. ನೀನು ಇಲ್ಲಿದ್ದಾಗ ನನ್ನ ಮನಸ್ಸಿಗೆ ಎಷ್ಟು ಉಲ್ಲಾಸವಿರುತಿತ್ತು ಎಂಬುದು ನೀನು ಇಲ್ಲಿಂದ ಹೋದ ಬಳಿಕವೇ ನನ್ನ ಲಕ್ಷ್ಯಕ್ಕೆ ಬಂತು. ಅಂದಿನಿಂದ ನನ್ನ ಮನಸ್ಸಿಗೆ ಒಂದು ನಿಮಿಷವಾದರೂ ಸುಖ ತಿಳಿಯದಾಯಿತು; ಶಾಂತಿ ಸುಳಿಯದಾಯಿತು!"

ಸುಶೀಲೆ ನಾಚಿಕೆಯಿಂದ ಮುಖವನ್ನು ತಗ್ಗಿಸಿದಳು; ತನ್ನ ಕೈಯನ್ನು ನನ್ನ ಹಿಡಿತದಿಂದ ತಪ್ಪಿಸನೋಡಿದಳು. ಆದರೆ ನಾನು ಅದನ್ನು ಮತ್ತಷ್ಟು ಬಿಗಿಯಾಗಿ ಹಿಡಿದೆನು.

"ಸುಶೀ!" ನಾನು ಮೃದುವಾಗಿ ಕರೆದೆನು.

ಸುಶೀಲೆ ತನ್ನ ಸುಂದರವಾದ ಮುಖವನ್ನು ಮೇಲಕ್ಕೆ ಎತ್ತಿದಳು; ಆಸೆಯಿಂದ ತುಂಬಿದ ಅವಳ ದೃಷ್ಟಿಯು ನನ್ನ ದೃಷ್ಟಿಯನ್ನು ಕೂಡಿತು.

ನಾನು ಅವಳ ಎರಡೂ ಕೈಗಳನ್ನು ಎತ್ತಿಕೊಂಡೆನು.

"ನೀನು ಇಲ್ಲಿಲ್ಲದಿದ್ದರೆ ನನ್ನ ಬಾಳು ಬರೇ ಮರುಭೂಮಿಯಂತೆ ವ್ಯರ್ಥವಾಗುತ್ತದೆ, ಸುಶೀ! ಆದುದರಿಂದ ಇನ್ನು ಮುಂದೆ ನೀನು ಮುಂಚಿನಂತೆಯೆ ಹರುಷದ ಹೊನಲನ್ನು ಹರಿಯಿಸುತ್ತ ಇಲ್ಲಿಯೆ ಇರಲಾರಿಯಾ? ನನ್ನ ಜೀವನವನ್ನು ಹಿಂದಿನಂತೆಯೆ ಸುಖಮಯವಾಗಿ ಮಾಡಲಾರಿಯಾ? ಸುಶೀ! ದಯೆಮಾಡಿ ನನ್ನ ಈ ಬೇಡಿಕೆಯನ್ನು ಅಲ್ಲಗಳೆಯಬೇಡ!" ನಾನು ಆರ್ತಸ್ವರದಿಂದ ಅಂಗಲಾಚಿದೆನು.

ಸುಶೀಲೆಯ ಸ್ವಾವಲಂಬನವು ಅವಳನ್ನು ಪೂರ್ತಿಯಾಗಿ ಕೈಬಿಟ್ಟಿತು. ಅವಳು ತನ್ನ ಮುಖವನ್ನು ಫಕ್ಕನೆ ನನ್ನ ಎದೆಯ ಮೇಲೆ ಅಡಗಿಸಿದಳು, ದಿಕ್ಕು ತೋಚದ ಹಕ್ಕಿಯಂತೆ. ಉಕ್ಕಿ ಬಂದ ಭಾವಗಳನ್ನು ಅವಳಿಂದ ತಡೆಯಲಾಗಲಿಲ್ಲ; ಬಿಕ್ಕಿಬಿಕ್ಕಿ ಅಳತೊಡಗಿದಳು.

ನಾನು ಅವಳನ್ನು ಮೃದುವಾಗಿ ಬಿಗಿದಪ್ಪಿದೆನು.

"ನನ್ನ ಸುಶೀ! ಇಂದಿನಿಂದ ನೀನು ನನ್ನವಳೇ, ನಾನು ನಿನ್ನವನೇ. ನಮ್ಮ ದುಃಖದ ದಿನಗಳು ಇನ್ನು ತೀರಿದುವು; ಅವುಗಳನ್ನು ನಾವು ಮರೆತುಬಿಡುವ. ನಮ್ಮ ಒಲುಮೆಯ ಚೆಲುವು ಮುಂದೆ ಎಂದೆಂದಿಗೂ ಚಿಮ್ಮಿ ನಲಿಯುತ್ತಿರಲಿ!" ನಾನು ಅವಳನ್ನು ಮೈದಡವಿ ಸಂತೈಸಿದೆನು.

ಸುಶೀಲೆ ಒಂದು ನಿಡಿದಾದ ನಿಃಶ್ವಾಸವನ್ನು ಬಿಟ್ಟಳು. ಕೋಮಲವಾದ ಅವಳ ನಳಿದೋಳುಗಳು ನನ್ನ ಕೊರಳನ್ನು ಬಿಗಿದುವು; ಕೃತಜ್ಞತೆಯಿಂದ ತುಂಬಿದ ಅವಳ ದೃಷ್ಟಿಯು ನನ್ನ ದೃಷ್ಟಿಯೊಂದಿಗೆ ಕಲೆಯಿತು; ಮಂದಹಾಸದಿಂದ ಅರಳಿದ ಅವಳ ಚೆಂದುಟಿಗಳು ನನ್ನ ತುಟಿಗಳೊಂದಿಗೆ ಒಂದಾದುವು.

# 'ವಿಲುಪ್ತ ವಸ್ತು'

ಶ್ಯಾಮಸುಂದರನ ಚಿತ್ರಕಲೆಯ ಜಾಣತನಕ್ಕೆ ಎಲ್ಲರೂ ತಲೆದೂಗಿದ್ದರು. ಕಳೆದ ಎರಡು ವರ್ಷಗಳ ಚಿತ್ರಕಲಾಪ್ರದರ್ಶನದಲ್ಲಿಯೂ ಚಿನ್ನದ ಪದಕವನ್ನು ಶ್ಯಾಮುವಿಗೇ ಕೊಟ್ಟಿದ್ದರು. ಆದರೆ ಅದು ನಳಿನಿಯೊಬ್ಬಳಿಗೆ ಮಾತ್ರ ಅಷ್ಟೊಂದು ಸಮಂಜಸವೆಂದು ಕಂಡುಬಂದಿರಲಿಲ್ಲ.

ಮೊದಲನೆಯ ವರ್ಷ ಶ್ಯಾಮುವಿನ 'ಆರಾಧ್ಯ ದೇವತೆ' ತನ್ನ 'ನಿಸರ್ಗರಾಣಿ'ಗಿಂತಲೂ ಯಾವ ಅಂಶದಲ್ಲಿ ಮಿಗಿಲಾಗಿದ್ದಳು? ಎರಡನೆಯ ವರ್ಷ ಅವನ 'ಆಶಾಂಕುರ' ತನ್ನ 'ಅರುಣರಾಗ'ವನ್ನು ಹೇಗೆ ಮೀರಿತ್ತು?—ಇದು ಅವಳಿಗೆ ಎಷ್ಟು ಆಲೋಚಿಸಿದರೂ ತಿಳಿಯದಾಗಿತ್ತು.

ಆದರೂ ತನಗೆ ಬೆಳ್ಳಿಯ ಪದಕವೇ, ಎರಡೂ ವರ್ಷ!

* * * *

ಶ್ಯಾಮುವಿನ ಚಿತ್ರಗಳೇನೋ ನಿಜವಾಗಿಯೂ ಉತ್ಕೃಷ್ಟವಾಗಿದ್ದುವು. ಇದು ನಳಿನಿಗೆ ಒಪ್ಪಿಗೆಯೆ. ಆದರೆ ತನ್ನವು ಅವನವುಗಳಿಗಿಂತಲೂ ಎಷ್ಟಕ್ಕೂ ನಿಕೃಷ್ಟವಾಗಿರಲಿಲ್ಲ!—ಹೀಗೆಂಬುದೇ ಅವಳಲ್ಲಿ ನೆಲೆನಿಂತ ನಂಬಿಕೆ.

ಆದರೂ ಎಲ್ಲರೂ ಶ್ಯಾಮುವಿನ ಚಿತ್ರಗಳಿಗೆಲ್ಲ ತುರಾಯಿ ಕಟ್ಟುತ್ತಿದ್ದರು. ಮತ್ತು ತನ್ನ ಚಿತ್ರಗಳಲ್ಲೆಲ್ಲ ಯಾವುದೋ ಒಂದು ವಸ್ತು (Element or Essential) ವಿಲುಪ್ತವಾಗಿರುವುದು ಎನ್ನುತ್ತಿದ್ದರು. ಎಷ್ಟು ಯೋಚಿಸಿನೋಡಿದರೂ ನಳಿನಿಗೆ ಅದು ಏನೆಂದು ಮನಸ್ಸಿಗೇ ಹೋಗುತ್ತಿರಲಿಲ್ಲ.

* * * *

ಆದರೂ ನಳಿನಿಗೆ ಶ್ಯಾಮುವಿನ ಮೇಲೆ ಒಂದಿಷ್ಟೂ ಸಿಟ್ಟು ಇರಲಿಲ್ಲ, ಹೊಟ್ಟೆಕಿಚ್ಚು ಇರಲಿಲ್ಲ. ಮಾತ್ರವಲ್ಲ, ಅವಳು ಅವನೊಡನೆ, ಅವನು ಅವಳೊಡನೆ ಅನ್ಯೋನ್ಯವಾಗಿಯೆ ಇರುತ್ತಿದ್ದರು.

ನಳಿನಿ ಶ್ಯಾಮುವಿನ ಸಂಗಡ ಆಗಿಂದಾಗ ಚಿತ್ರಕಲೆಯನ್ನು ಕುರಿತು ಚರ್ಚಿಸುತ್ತಿದ್ದಳು; ಚಿತ್ರಗಳನ್ನು ಕುರಿತು ತರ್ಕಿಸುತ್ತಿದ್ದಳು. ಅವನ ಸೂಚನೆ ಸಲಹೆಗಳನ್ನು ಮಾನ್ಯಮಾಡುತ್ತಲೂ ಇದ್ದಳು.

ನಳಿನಿ ಒಂದು ಚಿತ್ರವನ್ನು ಪೂರ್ತಿಮಾಡುತ್ತಲೇ ಶ್ಯಾಮುವನ್ನು ಕರೆತಂದು ತೋರಿಸುವಳು; ಹಾಗೆಯೆ ಶ್ಯಾಮು ಒಂದು ಚಿತ್ರವನ್ನು ಕೊನೆಗಾಣಿಸುತ್ತಲೇ ನಳಿನಿಯನ್ನು ಕರೆತಂದು ಪ್ರದರ್ಶಿಸುವನು;—ಇದು ಅಂದಿನಿಂದ ಇಂದಿನ ವರೆಗೂ ನಡೆದುಬಂದ ಅವರ ವಾಡಿಕೆ.

* * * *

ನಳಿನಿ ಶಪಥ ಹಾಕಿದ್ದಳು, ಯಾವುದಕ್ಕೂ ಇದೊಂದು ವರ್ಷ ನೋಡಿಯೆ ಬಿಡಬೇಕೆಂದು. ಈ ವರ್ಷ ತಾನು ಚಿನ್ನದ ಪದಕ ಪಡೆದೇ ಪಡೆಯುವೆನು; ಇಲ್ಲದಿದ್ದರೆ ಇನ್ನು ಮುಂದೆ ಖಂಡಿತವಾಗಿಯೂ ಪ್ರದರ್ಶನಗಳಲ್ಲಿ ಸ್ಪರ್ಧಿಸುವುದೇ ಇಲ್ಲ!—ಇದೇ ಅವಳ ನಿರ್ಧಾರ.

ಅದಕ್ಕಾಗಿಯೆ ಕಳೆದ ಸಲದ ಸ್ಪರ್ಧೆಯ ಫಲಿತಾಂಶವು ಹೊರಬಿದ್ದಂದಿನಿಂದ ನಳಿನಿ ಒಂದು ಕ್ಷಣವಾದರೂ ಸುಮ್ಮನೆ ಕಳೆದಿರಲಿಲ್ಲ; ಎಷ್ಟೋ ಚಿತ್ರಗಳನ್ನು ಬರೆದಿದ್ದಳು. ಅವುಗಳಲ್ಲಿ 'ಗಾನಲೋಲ'ನಿಗೇ ಅವಳು ಮೊದಲನೆಯ ಸ್ಥಾನವನ್ನು ಕೊಟ್ಟಿದ್ದಳು; ಅವನ ಮೇಲೆಯೆ ಅವಳ ಎಲ್ಲ ಆಸೆಗಳೂ ಹೊಂದಿಕೊಂಡಿದ್ದುವು.

* * * *

ಶ್ಯಾಮುವಾದರೆ ನಳಿನಿಯನ್ನು ತನ್ನ ಆರಾಧ್ಯ ದೇವತೆ ಎಂದೇ ನಂಬಿದ್ದನು. ಅವನು ತನ್ನ ಹೃದಯವನ್ನೇ ಅವಳ ಕಾಲ

ಬುಡದಲ್ಲಿ ಇರಿಸಿದ್ದನು. ಆದರೆ ನಳಿನಿ ಅದನ್ನು ಕೈಯಿಂದ ಎತ್ತಿ ಹಿಡಿಯುವ ಬದಲಿಗೆ ಕಾಲಿಂದ ಒತ್ತಿಹಿಡಿದಿದ್ದಳು.

ಇದರ ಯಾತನೆಯಿಂದ ಶ್ಯಾಮು ಗಳಿಗೆ-ಗಳಿಗೆಗೂ ನರಳುತ್ತಿದ್ದನು; ತನ್ನ ಆ ಸಂಕಟವನ್ನು ಚಿತ್ರಗಳ ಮೂಲಕ ಹೊರಸೂಸುತ್ತಿದ್ದನು. ಇಂತಹ ಚಿತ್ರಗಳೆಲ್ಲ ಗರ್ವಿಷ್ಟ ಭಾವನಾಶಿಶುಗಳಾದ ನಳಿನಿಯ ಚಿತ್ರಗಳನ್ನು ಹಿಂದೆಹಾಕುತ್ತಿದ್ದುವು; ಇದರಲ್ಲಿ ಆಶ್ಚರ್ಯವಿದೆಯೇ?

* * * *

ನಳಿನಿಯ ಚಿತ್ರಗಳೆಲ್ಲ ಬರೇ ಬಾಹ್ಯಸೌಂದರ್ಯವನ್ನೇ ಪ್ರತಿಬಿಂಬಿಸುತ್ತಿದ್ದು, ಭಾವನಾಪರ (Imaginative) ಆಗಿದ್ದುವು; ಅವುಗಳಲ್ಲಿ ಹೃದಯದ ಆಂತರಿಕ ಸೌಂದರ್ಯಕ್ಕೆ ಎಲ್ಲಿಯೂ ಸ್ಥಾನವೇ ಇರಲಿಲ್ಲ. ಆದರೆ ಶ್ಯಾಮು ಬರೆಯುತ್ತಿದ್ದುದೆಲ್ಲ, ಹೃದಯದ ಆಂತರಿಕ ಲಾವಣ್ಯವನ್ನೇ ಹೊರಹೊಮ್ಮುವ ಭಾವಪರ (Emotional) ಚಿತ್ರಗಳನ್ನೇ! ಇವುಗಳಲ್ಲಿ ಅವನು ಬಾಹ್ಯಸೌಂದರ್ಯಕ್ಕೆ ಅಷ್ಟೊಂದು ಪ್ರಾಧಾನ್ಯವನ್ನು ಕೊಡುತ್ತಿರಲಿಲ್ಲ; ಆದರೂ ಅದನ್ನು ಅಲಕ್ಷಿಸುತ್ತಿರಲಿಲ್ಲ. ಹಾಗಾಗಿ, ನಳಿನಿಯ ಚಿತ್ರಗಳು ಬರೇ ಭಾವನಾಪರವಾಗಿರಲು, ಶ್ಯಾಮುವಿನವೆಲ್ಲ ಒಮ್ಮೆಗೇ ಭಾವನಾಪರವೂ ಭಾವಪರವೂ ಆಗಿದ್ದುವು.

ಶ್ಯಾಮುವಿಗೆ ಖಚಿತವಾಗಿ ತಿಳಿದಿತ್ತು, ತನ್ನ ಚಿತ್ರಗಳು ನಳಿನಿಯವುಗಳಿಗಿಂತಲೂ ಉತ್ಕೃಷ್ಟವೆಂದು ಸ್ಪರ್ಧಾಧಿಕಾರಿಗಳು ತೀರ್ಮಾನಿಸಿರುವುದರ ಮರ್ಮವು ಇದೇ ಆಗಿತ್ತೆಂದು. ಅವನಿಗೆ ಆಗಿಂದಾಗ ಹೊಳೆಯುತ್ತಿತ್ತು, ಭಾವವೇ ನಳಿನಿಯ ಚಿತ್ರಲೇಖನದೊಳಗಿನ ಮುಖ್ಯವಾದ 'ವಿಲುಪ್ತ ವಸ್ತು'ವೆಂದು.

* * * *

ಈ ವರ್ಷದ ಚಿತ್ರಕಲಾಪ್ರದರ್ಶನಕ್ಕೆ ಇನ್ನು ಒಂದೇ ಪಕ್ಷ ಉಳಿದಿತ್ತು. ಶ್ಯಾಮು ನಳಿನಿಯರು ತಂತಮ್ಮ ಸ್ಪರ್ಧಾಚಿತ್ರಗಳನ್ನು ಬಹಳ ಉತ್ಸಾಹದಿಂದ ಚಿತ್ರಿಸುತಿದ್ದರು.

ಶ್ಯಾಮುವಿಗೆ ಈ ದಿನ ಸ್ವಲ್ಪ ಬಿಡುವಿತ್ತು; ಅವನು ಹಾಗೆಯೆ ಕುಳಿತು ತನ್ನ ನಿರ್ಭಾಗ್ಯ ಜೀವನವನ್ನು ಕುರಿತು ಯೋಚಿಸುತ್ತಿದ್ದನು. ಆಗಲೇ ಅವನಿಗೆ ಒಂದು ನವೀನ ಭಾವವು ತಲೆದೋರಿತು. ಒಡನೆ ಅದನ್ನು ಚಿತ್ರಿಸಿ ಈ ಸಲವೇ ಪ್ರದರ್ಶಿಸಬೇಕೆಂದು ನಿರ್ಧರಿಸಿದನು. ನಿರ್ಧರಿಸಿದ ಮೇಲೆ ತಡವಿದೆಯೇ?—ಸೈ! ಪ್ರಾರಂಭವೂ ಆಯಿತು!

ಶ್ಯಾಮು ನಿಶ್ಚಯಿಸಿದನು, ತನ್ನ ಈ ನೂತನ ಭಾವನಾಶಿಶುವಾದ 'ವಿಲುಪ್ತ ವಸ್ತು'ವೇ ತನಗೆ ಈ ವರ್ಷದ ಚಿನ್ನದಪದಕವನ್ನು ಗೆಲ್ಲಬೇಕೆಂದು; ಮತ್ತು ತನ್ನ ಹೃದಯವನ್ನೇ ಅದರಲ್ಲಿ ಎರಕ ಹೊಯ್ಯತೊಡಗಿದನು.

ಈ ವರ್ಷ ಶ್ಯಾಮುವಿಗೆ ಮನೆಯ ತೊಂದರೆಗಳು ಮಿತಿಯಿಲ್ಲದಷ್ಟಿದ್ದುವು; ಅದರಿಂದಾಗಿ ಅವನಿಗೆ ಹೆಚ್ಚು ಚಿತ್ರಗಳನ್ನು ಬರೆಯಲಾಗಿರಲಿಲ್ಲ. ಆದರೂ ಅವನ 'ಅತೃಪ್ತ ತೃಷೆ', 'ಆತ್ಮೋತ್ಸರ್ಗ' ಮತ್ತು 'ನಿರೀಕ್ಷೆ'—ಇವು ಅವನ 'ಆರಾಧ್ಯ ದೇವತೆ'ಯನ್ನೂ 'ಆಶಾಂಕುರ'ವನ್ನೂ ಮೀರುವಂತೆ ಇದ್ದುವು. 'ವಿಲುಪ್ತ ವಸ್ತು'ವಿನಲ್ಲಿ ಅವನು ನೂತನವಾದೊಂದು ಮಾರ್ಗವನ್ನೇ ಅವಲಂಬಿಸಿದನು. ಅದರ ಪರಿಣಾಮವನ್ನು ಪರೀಕ್ಷಿಸುವುದೇ ಅವನ ಮುಖ್ಯ ಉದ್ದೇಶ.

* * * *

ಈ ದಿನ ನಳಿನಿಯು 'ಹಿಮಾಂಶು' ಅದೇ ಪೂರ್ಣವಾಗಿ ಮೂಡಿದ್ದನು; ಶ್ಯಾಮುವಿಗೆ ಆತನ ಸೊಬಗಿನ ಸೂರೆಗೆ ಆಮಂತ್ರಣ

ಬಂದಿತ್ತು. ಅವನು ತನ್ನ ಚಿತ್ರದ ಇಂದಿನ ಕೆಲಸ ಮುಗಿಯುತ್ತಲೇ ನಳಿನಿಯ ಮನೆಗೆ ಹೋಗಬೇಕೆಂದು ಬಗೆದಿದ್ದನು.

ಯಾವುದನ್ನೂ ತಡೆಯಬಹುದು; ಆದರೆ ಭಾವನೆಯನ್ನು ಮಾತ್ರ ತಡೆಯಲಾಗದು! ಅದೂ, ಮನಸ್ಸು ಅರಳಿದಾಗ ಭಾವನಾ ಝರಿ ಪೂರ್ಣವೇಗದಿಂದ ಮುಂಬರಿಯುವುದು. ಶ್ಯಾಮುವಿನ ವಿಷಯದಲ್ಲಿಯಾದರೂ ಅದು ದಾಕ್ಷಿಣ್ಯ ಮಾಡಲಿಲ್ಲ. ಅದರ ಹರಿಯುವಿಕೆಯ ಭರದಲ್ಲಿ ಶ್ಯಾಮು ಸಮಯವನ್ನೇ ಮರೆತನು.

ತನ್ನ ಕೆಲಸಕ್ಕೆ ಕತ್ತಲೆಯು ಅಡ್ಡಿ ಒಡ್ಡಿದಾಗಲೇ ಶ್ಯಾಮು ತನ್ನ ಭಾವನಾಪ್ರಪಂಚದಿಂದ ಇಹಲೋಕಕ್ಕೆ ಬಂದನು. ಆಗ ತಾನೇ ಅವನಿಗೆ, ತಾನು ನಳಿನಿಗೆ ಕೊಟ್ಟ ಮಾತಿನ ನೆನಪಾಯಿತು. ಅಂತೂ, ಈಗಲೀಗ ಏನು ಮಾಡಲಾದೀತು? ಮರುದಿನ ಬೆಳಿಗ್ಗೆ ಎಲ್ಲಕ್ಕೂ ಮುಂಚೆ ಅವರಲ್ಲಿ ಹೋಗಿ ಬಂದರಾಯಿತು. ಇನ್ನೇತರ ಯೋಚನೆ?

೨

ನಳಿನಿ ಮರುದಿನ ಬೆಳಗಾತವೆಲ್ಲ, ಹಿಂದಿನ ದಿನದಂತೆಯೆ, ಶ್ಯಾಮು ವಿಗಾಗಿ ಕಾದು-ಕಾದು ಭಗ್ನಮನೋರಥೆಯಾದಳು. ಕಡೆಗೆ ಮಧ್ಯಾಹ್ನದ ಊಟವಾಗುತ್ತಲೇ ತೀರ ಉತ್ಸುಕಳಾಗಿ ತಾನೇ ಶ್ಯಾಮುವಿನಲ್ಲಿಗೆ ಹೋದಳು.

ನಳಿನಿ ಹೋಗಿ ನೋಡುವಾಗ ಶ್ಯಾಮು ಜ್ವರಹಿಡಿದು ಮಲಗಿದ್ದಾನೆ. ಅವಳು ಎಂದಾದರೂ ಶ್ಯಾಮು ಕಾಯಿಲೆಬಿದ್ದುದನ್ನೇ ಕಂಡರಿಯಳು. ಹಾಗಿದ್ದು ಈ ದಿನ, ಸರಿ ಕಣ್ಣು ತೆರೆಯಲಾರದೆ, ಸ್ಪಷ್ಟವಾಗಿ ಮಾತಾಡಲಾರದೆ, ಮುಸುಕೆಳೆದು ಮಲಗಿದ್ದ ಆ ವ್ಯಕ್ತಿಯನ್ನು ನೋಡುತ್ತಲೇ ಅವಳ ಎದೆಯು ಕರಗಿ ನೀರಾಯಿತು. ಒಮ್ಮಿಂದೊಮ್ಮೆಗೆ ಚಿತ್ರಗಳಲ್ಲಿನ ಅವಳ ಆಸಕ್ತಿಯೆಲ್ಲ ಹೀರಿ

ಹೋದಂತಾಯಿತು. ಅವಳು ತಾನು ಬಂದ ಉದ್ದೇಶವನ್ನು ಕುರಿತು ಮಾತೇ ಎತ್ತಲಿಲ್ಲ.

"ಶ್ಯಾಮೂ! ಜ್ವರವನ್ನು ಅಲಕ್ಷಿಸಿ ಅಪಥ್ಯ ಮಾಡಬೇಡ, ಎಚ್ಚರಿಕೆ! ಏನು, ನಿನ್ನೆ ಮಧ್ಯಾಹ್ನ ಬಂತೇ?" ನಳಿನಿ ಎಚ್ಚರಕೊಟ್ಟು ಕೇಳಿದಳು.

"ಇಲ್ಲ, ನಳಿನಿ!—ಈಹೊತ್ತು ಬೆಳಿಗ್ಗೆ ಏಳುವಾಗಲೇ ಕಾಣಿಸಿತು; ನಿನ್ನೆ ನಾನು ಬಾರದಿದ್ದುದರ ಕಾರಣ ಅಗೋ!" ಶ್ಯಾಮು ತಾನು ಪೆನ್ಸಿಲಿನಿಂದ ಬರೆದುಮುಗಿಸಿ, ಬಣ್ಣ ಹಾಕಲು ತಯಾರಿಸಿದ್ದ 'ವಿಲುಪ್ತ ವಸ್ತು'ವಿನ ಬಾಹ್ಯರೇಖಾಚಿತ್ರದ ಕಡೆಗೆ ತೋರಿಸಿದನು.

"ಇದೇನು, ಇನ್ನೊಂದು ಚಿತ್ರ! ಇದನ್ನೂ ಮುಗಿಸಿ ಸ್ಪರ್ಧೆಗೆ ತರುವ ಯತ್ನವೇ? ಯಾಕೆ, ಇದ್ದುವು ಸಾಲವೇನು?"

"ನೋಡು, ಇದನ್ನು ಹೊಸ ಮಾದರಿಯಲ್ಲಿ ಬರೆದಿರುವೆನು. ಬಣ್ಣ ಕೊಟ್ಟರೆ ಇದು ನನ್ನ ಈವರೆಗಿನ ಎಲ್ಲ ಚಿತ್ರಗಳನ್ನೂ ಹಿಮ್ಮೆಟ್ಟಿಸದೆ ಇರಲಾರದು. ಈ ವರ್ಷ ಚಿನ್ನದ ಪದಕವನ್ನು ಖಂಡಿತವಾಗಿಯೂ ಈ 'ವಿಲುಪ್ತ ವಸ್ತು'ವೇ ಪಡೆಯುವುದು, ನೋಡು!"

"ಏನು? 'ವಿಲುಪ್ತ ವಸ್ತು'?"

"ಹೌದು, ನಳಿನಿ! ಅದೇ ಇದರ ಹೆಸರು. ನೋಡು, ಈ ಚಿತ್ರದೊಳಗಿನ ವ್ಯಕ್ತಿಗಳೊಳಗೆ ಒಂದರಲ್ಲಿ ಒಂದು ವಸ್ತು ವಿಲುಪ್ತವಾಗಿರುವುದು. ಈ ಎರಡನೆಯ ವ್ಯಕ್ತಿಯು ಮೊದಲನೆಯದನ್ನು ಪರಿಪೂರ್ಣತೆಗೆ ತರಲು ಪ್ರಯತ್ನಿಸುತ್ತಿರುವುದು."

"ಅದೇನು, ಶ್ಯಾಮೂ? ವಿವರಿಸಲಾಗದೇ?"

“ಇಲ್ಲ; ಅದನ್ನು ನೀನೇ ಕಂಡುಹಿಡಿಯುವಿಯಂತೆ!”

* * * *

ನಳಿನಿ ಚಿತ್ರವನ್ನು ಹೆಚ್ಚಿನ ಲಕ್ಷ್ಯಕೊಟ್ಟು ನೋಡಿದಳು: ಅದರಲ್ಲಿ ಒಬ್ಬ ಸುಂದರ ತರುಣಿ; ಎದುರಿನ ಕೊಳದ ಕಡೆಗೆ ಸಾಗುವುದಕ್ಕೆ ಒಂದು ಕಾಲನ್ನು ಸ್ವಲ್ಪ ಎತ್ತಿಕೊಂಡು ನಿಂತಿದ್ದಳು. ಅವಳ ಕಾಲ ಬುಡದಲ್ಲಿ ಒಬ್ಬ ಸುರೂಪಿ ಯುವಕ; ಅವನ ಕೈಯಲ್ಲಿ ತಾವರೆಗಳು; ಅವನ್ನು ಅವಳಿಗೆ ಸಮರ್ಪಿಸುವ ಆತುರದಿಂದ ಅವಳ ಕಡೆಗೆ ನೀಡುತ್ತ, ಮೊಣಕಾಲೂರಿಕೊಂಡು ಇದ್ದನು. ಅವನ ದೃಷ್ಟಿಯು ಅವಳ ಮೊಗದಾವರೆಯ ಕಡೆಗೆ; ಆದರೆ ಅವಳ ದೃಷ್ಟಿ ಮಾತ್ರ ಮುಂದಿನ ಕೊಳದೊಳಗಿನ ಅದೊಂದು ತಾವರೆಯ ಕಡೆಗೆ.

ನಳಿನಿ ಬಹಳ ಸಮಯ ಅದನ್ನೇ ನೋಡಿದಳು. ಭಾವವು ಅವಳ ಮನಸ್ಸಿನಲ್ಲಿ ಕಣ್ಣುಮುಚ್ಚಾಲೆ ಆಡತೊಡಗಿತು, ಅರೆನೆನಪಾಗುವ ನಲ್ಲನಸಿನಂತೆ!

* * * *

ನಳಿನಿ ಸಂಜೆಯ ವರೆಗೆ ಶ್ಯಾಮುವಿನ ಹಾಸಿಗೆಯ ಬಳಿಯಲ್ಲಿಯೆ ಕುಳಿತಳು. ಅವಳು ಅವನಿಗೆ ಹೆಚ್ಚು ಮಾತಾಡಗೊಡಲಿಲ್ಲ. ಜಾಗರೂಕತೆಯನ್ನೂ ತೀವ್ರಗುಣದ ಭರವಸೆಯನ್ನೂ ಹೇಳಿ, ಏನೋ ಗಭೀರವಾದ ಯೋಚನೆಯಲ್ಲಿ ಮುಳುಗಿದವಳಂತೆ ಕುಳಿತುಬಿಟ್ಟಳು.

ತನ್ನ ಬಾಳಿನಲ್ಲಿ ಶ್ಯಾಮು ಮೊದಲು ಕಾಲಿಟ್ಟಾಗಿನಿಂದ ಅಂದಿನ ವರೆಗೆ ಎಷ್ಟೋ ಸಂಗತಿಗಳು ನಡೆದಿದ್ದುವು; ಅವೆಲ್ಲ ಅವಳ ಮನಸ್ಸಾಗರದ ತಡಿಗೆ ಬಂದುಹೋದುವು. ನಳಿನಿ ಶ್ಯಾಮುವಿನ ಕೊಠಡಿಯೊಳಗೆ ಬರುವಾಗಿನ ವರೆಗೆ ಬರೀ ಬಾಲಿಕಾಸುಲಭವಾದ ಸರಳ ಮನಸ್ಸಿನಿಂದ ಕೂಡಿದ್ದಳು; ಅದರಿಂದ ಹೊರಗೆ ಹೋಗುವಾಗ ಏನೋ ಒಂದು ತರದ ನವೀನ ಪ್ರೌಢಿಮೆಯ ಅನುಭವ ಹೊಂದಿಯೆ ಹೋದಳು.

೩

ನಳಿನಿ ಮರುದಿನ ಬೆಳಿಗ್ಗೆಯೂ ಬಂದಳು. ಶ್ಯಾಮುವಿಗೆ ಜ್ವರ ಇನ್ನೂ ಬಿಟ್ಟಿರಲಿಲ್ಲ; ಬೇಗ ಬಿಡುವಂತೆಯೂ ಕಾಣಲಿಲ್ಲ. ಅವಳಿಗೆ ಶ್ಯಾಮುವಿಗಾಗಿ ಬಹಳ ಕನಿಕರ ಹುಟ್ಟಿತು. 'ವಿಲುಪ್ತ ವಸ್ತು'ವಿನ ಕೆಲಸವು ಹಿಂದೆ ಬಿದ್ದುದಕ್ಕಾಗಿ ಅವನು ಬಹಳ ಕಳವಳ ಪಡುತ್ತಿದ್ದನು. ಅದನ್ನು ನೋಡಿ ನಳಿನಿ ಸ್ಥೈರಿಸದಾದಳು. ಶ್ಯಾಮುವಿಗೆ ಸ್ವಂತ ದೇಹದ ಮೇಲೂ ಇರದಷ್ಟು ಪ್ರೇಮವು ಚಿತ್ರಕಲೆಯ ಮೇಲೆ ಇರುವುದಲ್ಲ!—ಇದನ್ನು ಕಂಡು ಅವಳು ಬೆರಗಾದಳು.

"ಶ್ಯಾಮೂ! ನೀನಂತೂ ಇನ್ನೂ ಒಂದೆರಡು ದಿನವಾಗದೆ ಚಿತ್ರಕ್ಕೆ ಕೈಹಾಕದಂತಿರುವಿಯಷ್ಟೆ? ಅದನ್ನು ಈ ಸಲವೇ ಪ್ರದರ್ಶಿಸಬೇಕೆಂದು ನಿನಗೆ ಅಷ್ಟೊಂದು ಆತುರವಿದೆಯಾದರೆ ನೀನು ಗುಣಹೊಂದುವ ವರೆಗೆ ಅದಕ್ಕೆ ಬಣ್ಣ ಕೊಡುವ ಕೆಲಸವನ್ನು ನಾನೇಕೆ ಮುಂದೊತ್ತಬಾರದು? ಜ್ವರ ಬಿಡಲಿ, ತಕ್ಕಷ್ಟು ಶಕ್ತಿ ತುಂಬಲಿ; ಆಮೇಲೆ ಮುಂದಿನ ಕೆಲಸವನ್ನು ನೀನೇ ಮಾಡುವಿಯಂತೆ. ಓಡಿ ಬರುತ್ತಿದೆಯಲ್ಲ, ಸ್ಪರ್ಧೆಯ ದಿನ!" ನಳಿನಿ ಎಂದಳು.

ಶ್ಯಾಮು ಅದಕ್ಕೆ ಒಪ್ಪಿದನು. ನಳಿನಿ ಚಿತ್ರವನ್ನು ಮುಂದುವರಿಸಿದಳು.

* * * *

ಶ್ಯಾಮುವಿಗೆ ಮರುದಿನವೇ ಜ್ವರ ಬಿಟ್ಟಿತು; ಆದರೂ ನಿತ್ರಾಣದಿಂದ ಕೆಲವು ದಿನಗಳ ವರೆಗೆ ಏನೂ ಮಾಡಕೂಡಲಿಲ್ಲ.

ನಳಿನಿ 'ವಿಲುಪ್ತ ವಸ್ತು'ವಿನ ಕೆಲಸವನ್ನು ಬಹಳ ಸ್ಫೂರ್ತಿಯಿಂದ ಮುಂದೆ ಸಾಗಿಸಿದಳು. ಕ್ಷಣಕ್ಷಣವೂ ಅವಳ ಉತ್ಸಾಹವು ಹೆಚ್ಚುತ್ತ ಹೋಯಿತು. 'ವಿಲುಪ್ತ ವಸ್ತು'ವಿನಲ್ಲಿ ಅವಳ ಪ್ರತಿಭೆಯು ಎಂದಿಗಿಂತಲೂ ಮಿಗಿಲಾಗಿ ಹರಿಯತೊಡಗಿತು.

ಶ್ಯಾಮು ನಳಿನಿಯ ಕೈವಾಡವನ್ನು ಅವಾಕ್ಕಾಗಿ ನೋಡುತ್ತ ಸಮಯ ಕಳೆದನು. ಅವನಿಗೆ ನಳಿನಿಯಲ್ಲಿ ಒಂದು ನವೀನ ಸ್ಫೂರ್ತಿಯು ಉದಯವಾಗಿದ್ದಂತೆ ಬೋಧೆಯಾಯಿತು; ಅದನ್ನು ಅವನು ಎಂದೂ ಕಂಡಿರಲಿಲ್ಲ. ಅವನ ಆಶ್ಚರ್ಯಚಕಿತ ದೃಷ್ಟಿಯು ಅತ್ತ ಇತ್ತ ಓಡಾಡತೊಡಗಿತು,—ಒಮ್ಮೆ ನಳಿನಿಯ ಕಡೆಗೆ, ಒಮ್ಮೆ ಚಿತ್ರದ ಕಡೆಗೆ.

ನಳಿನಿಯ ಕೆಲಸವನ್ನು ನೋಡುನೋಡುತ್ತ ಅವನ ಮನಸ್ಸಿನಲ್ಲಿ ಒಂದು ವಿಚಿತ್ರವಾದ ಕಲ್ಪನೆಯು ಮೂಡಿತು; ಅದರಿಂದ ಅವನಿಗೆ ಎಲ್ಲೆಯರಿಯದ ಸಂತೋಷವುಂಟಾಯಿತು: ಅವಳ 'ಅರುಣರಾಗ'ದಲ್ಲಿಯೂ 'ನಿಸರ್ಗರಾಣಿ'ಯಲ್ಲಿಯೂ, ಯಾಕೆ?—ಅವಳ ಈ ವರ್ಷದ ತನ್ನ ಆಸೆಗಳನ್ನೆಲ್ಲ ಕೇಂದ್ರೀಕರಿಸಿರುವ 'ಗಾನಲೋಲ'ನಲ್ಲಿಯೂ ಸಹ ಅವನಿಗೆ ಭಾವದ ಲೋಪವು ಒಡೆದು ಕಾಣಿಸಿತ್ತು. ಆದರೆ ನಳಿನಿಯ 'ವಿಲುಪ್ತ ವಸ್ತು'ವಿನ ಕೆಲಸದಲ್ಲಿ ವಿಲುಪ್ತ ವಸ್ತುವೇ ಇಲ್ಲದಂತೆ ಎನಿಸಿತು.

'ವಿಲುಪ್ತ ವಸ್ತು'ವಿನಲ್ಲಿ ಅವಳು ತನ್ನ ಹೃದಯವನ್ನು ಪೂರ್ತಿಯಾಗಿ ತೆರೆದು, ಅದರ ಆಂತರಿಕ ಸೌಂದರ್ಯವನ್ನು ಒಂದೇ ಸವನೆ ಎರಕಹೊಯ್ಯಲಾರಂಭಿಸಿದ್ದಳು! ಈವರೆಗೆ ಮರೆಯಲ್ಲಿಯೆ ಉಳಿದಿದ್ದ ಅವಳ ಹೃದಯದ ಆಂತರಿಕ ಲಾವಣ್ಯವು ತೀರ ಎಣೆಯಿಲ್ಲದಂತಿತ್ತು! ಅದರ ಮುಂದೆ ತನ್ನದು ಸೂರ್ಯನ ಮುಂದೆ ಒಂದು ಅಲ್ಪ ನಕ್ಷತ್ರದಂತೆಯೆ ಸರಿ!—ಇದನ್ನು ಯೋಚಿಸಿ ಶ್ಯಾಮು ತೀರ ಮುಗ್ಧನಾಗಿಹೋದನು. ನಳಿನಿಯ ಜಾಣತನದ ವಿಷಯದಲ್ಲಿ ಅವನಿಗೆ ಹಿಂದಿನಿಂದಲೂ ಸದಭಿಪ್ರಾಯವೇ ಇತ್ತು; ಈಗ ಅದು ಸಾವಿರ ಪಾಲಾಯಿತು!

೪

ನಳಿನಿ 'ವಿಲುಪ್ತ ವಸ್ತುವನ್ನು ತಾನೇ ಪೂರ್ತಿಮಾಡಿದಳು. ಆದರೆ ಶ್ಯಾಮು ಅದನ್ನು ತನ್ನ ಹೆಸರಲ್ಲಿ ಪ್ರದರ್ಶನದಲ್ಲಿಡಲು ನಿರಾ

ಕರಿಸಿದನು. ಅದನ್ನು ಅಷ್ಟು ಮನೋಹರವಾಗಿ ಮುಗಿಸಲು ತನ್ನಿಂದ ಎಂದೆಂದಿಗೂ ಕೈಗೂಡುತ್ತಿರಲಿಲ್ಲ; ಆದುದರಿಂದ ನಳಿನಿಯ ಪ್ರಯತ್ನದ ಫಲವನ್ನು ಅವಳೇ ಸ್ವೀಕರಿಸಬೇಕು,—ಎಂದು ವಾದಿಸಿದನು.

ನಳಿನಿ, ಕಡೆಗೆ ಉಪಾಯ ಕಾಣದೆ, 'ವಿಲುಪ್ತ ವಸ್ತು'ವನ್ನು ತನ್ನ ಸ್ಪರ್ಧಾಚಿತ್ರಗಳೊಂದಿಗೇ ಇರಿಸಿದಳು. ಆದರೂ ಅದು ಶ್ಯಾಮುವಿನ ಅಷ್ಟೊಂದು ಹೊಗಳಿಕೆಗೆ ಎಷ್ಟು ಮಾತ್ರಕ್ಕೂ ಅರ್ಹವಾಗಿರಲಿಲ್ಲ,—ಎಂದೇ ಅವಳ ಮತ. ಶ್ಯಾಮುವಿನ 'ಅತೃಪ್ತ ತೃಷೆ'ಯ ಮುಂದೆ ಅದು ತೀರ ಅನಾಮಿಕವಾಗಿತ್ತು,—ಎಂದೇ ಅವಳ ದೃಢ ವಿಶ್ವಾಸ. ಹಾಗಿರುವಾಗ ಅದನ್ನು ಪ್ರದರ್ಶನದ ಒಂದು ಮೂಲೆಯಲ್ಲಿ ಇರಿಸಿದರೆ ಏನು ನಷ್ಟ?

* * * *

ಪ್ರದರ್ಶನದಲ್ಲಿ 'ವಿಲುಪ್ತ ವಸ್ತು'ವನ್ನು ನೋಡಿದವರಲ್ಲಿ ಯಾರೂ ಅದರ ವಿಷಯವಾಗಿ 'ಪಿಟಕ್' ಎನ್ನಲಿಲ್ಲ; ಆದರೆ 'ಅತೃಪ್ತ ತೃಷೆ'ಯ ಕೊಂಡಾಟದಿಂದ ದಿಕ್ಕುಗಳೆಲ್ಲ ಪ್ರತಿಧ್ವನಿಸತೊಡಗಿದುವು.

"ನೋಡಿದಿಯಾ?" ನಳಿನಿ ನಿರ್ದೇಶಿಸಿದಳು, ಶ್ಯಾಮುವಿಗೆ.

"ನೀನು ನೋಡುವಿಯಂತೆ!" ಎಂದು ಶ್ಯಾಮು ಸುಮ್ಮನಾದನು.

* * * *

ಸ್ಪರ್ಧೆಯ ಫಲಿತಾಂಶವು ಪ್ರಕಟವಾದೊಡನೆಯೆ ನಳಿನಿ ಎಲ್ಲವನ್ನೂ ಮರೆತಳು; ನೆಟ್ಟಗೆ ಶ್ಯಾಮುವಿನ ಬಳಿಗೆ ಓಡಿಬಂದಳು.

"ನೋಡಿದಿಯಾ?" ಎನ್ನಲು ಈ ಸಲ ಶ್ಯಾಮುವಿನ ಸರ್ತಿಯಾಗಿತ್ತು.

"ಶ್ಯಾಮೂ! ಏನೇ ಇರಲಿ, ಚಿನ್ನದ ಪದಕವು ನಿನಗೇ ಸಲ್ಲ ತಕ್ಕುದು.—'ಅತೃಪ್ತ ತೃಷೆ'ಗಾಗಿ ಅಲ್ಲದಿದ್ದರೂ, 'ವಿಲುಪ್ತ ವಸ್ತು' ಯಾರದು?" ನಳಿನಿ ಎಂದಳು.

"ನಳಿನಿ, ನಿನಗೆ ಹುಚ್ಚು! ನನ್ನ ಅತೃಪ್ತತೃಷೆಯು ಪದಕಗಳಿಗಾಗಿ ಎಂದು ಎಣಿಸಿದಿಯಾ?" ಎಂದು ಶ್ಯಾಮು ನಳಿನಿಯ ಮುಂದಿನಿಂದ ತಲೆ ಮರೆಸಿಕೊಂಡನು.

ನಳಿನಿ ಯೋಚನೆಯಲ್ಲಿ ಮುಳುಗಿದಳು.

೫

ಶ್ಯಾಮು ಸಂಜೆಯಲ್ಲಿ ಮನೆಗೆ ಬಂದಾಗ ನಳಿನಿಯೆ ಅವನನ್ನು ಎದುರುಗೊಂಡಳು. ಅವಳು ಮೊದಲು ತನ್ನ ಕೈಯೊಳಗಿನ ಚಿನ್ನದ ಪದಕವನ್ನು ಶ್ಯಾಮುವಿನ ಕೈಯ ಮೇಲೆ ಇರಿಸಿ, "ಇದೂ ತನ್ನ ಸಂಗಾತಿಗಳನ್ನು ಸೇರುವುದೇ ನ್ಯಾಯ. ನೀನು ನಿರಾಕರಿಸಿದರೆ ನಾನು ಒಪ್ಪಲಾರೆ. ಮೂರೂ ಒಟ್ಟಿಗಿರಲಿ," ಎಂದಳು.

"ಮೂರೂ ಒಟ್ಟಿಗಿರುವುದಕ್ಕೆ ನನ್ನ ಅಡ್ಡಿಯಿಲ್ಲ; ಆದರೆ ಇದರ ಸಂಗಾತಿಗಳೇ ಇದನ್ನು ಸೇರುವುದಕ್ಕೆ ನಿನ್ನ ಒಪ್ಪಿಗೆ ಇದೆಯೇ?" ಶ್ಯಾಮು ಕೇಳಿದನು.

"ಆಂ?...........ಎಂದರೆ?...........ಅದು ಹೇಗೆ?" ಎಂದು ತಡವರಿಸುತ್ತ ನಳಿನಿ ಶ್ಯಾಮುವಿನ ಮುಖವನ್ನು ನೋಡಿದಳು. ಇಬ್ಬರ ದೃಷ್ಟಿಗಳೂ ಕೂಡಿದ ಆ ಒಂದು ಕ್ಷಣದಲ್ಲಿ ಇಬ್ಬರೊಳಗೂ ಅದೆಂತಹ ಅಭಿಪ್ರಾಯವಿನಿಮಯವಾಯಿತೋ, ಕಾಣೆ. ಆದರೆ ನಳಿನಿಯ ಗಲ್ಲಗಳು ಮಾತ್ರ ಅದೇಕೋ ನಸುಕೆಂಪೇರಿದುವು; ಅವಳು ಆ ಕ್ಷಣವೇ ತಲೆಯನ್ನು ಬಾಗಿಸಿ, ಕೈಬೆರಳುಗಳಿಂದ ಸೆರಗಿನ ಕೊನೆಯನ್ನು ತಿರುವುತ್ತ ಮೌನವಾಗಿ ನಿಂತಳು.

ನಳಿನಿಯ ಆ ಅರೆನೋಟದಲ್ಲಿ ಶ್ಯಾಮುವಿಗೆ ಅದೇನು ಸಂದೇಶವು ತಿಳಿದುಬಂತೋ. ಆದರೆ ಮರುಕ್ಷಣದಲ್ಲಿ ಅವನು ಮಿಂಚಿನ ವೇಗದಲ್ಲಿ ನಳಿನಿಯುನ್ನು ತನ್ನ ತೋಳುಗಳಿಂದ ಬಿಗಿದಾಗ ಅವಳು ಸ್ವಲ್ಪವೂ ಒದ್ದಾಡಲಿಲ್ಲ. ಅವಳಲ್ಲಿನ **'ವಿಲುಪ್ತ ವಸ್ತು'** ಆಗ ತಾನೇ ಮಾಯವಾಗಿ ಅವಳು ಪರಿಪೂರ್ಣತೆ ಹೊಂದಿದಳು.

* * * *

ನಳಿನಿ ಶ್ಯಾಮುವಿನ ಕೈಸೆರೆಯಿಂದ ಬಿಡುಗಡೆ ಹೊಂದಿದಾಗ ಮೂರೂ ಚಿನ್ನದ ಪದಕಗಳು ಅವಳ ಕೊರಳ ಸರಕ್ಕೆ ತೂಗಾಡುತಿದ್ದುವು.

# ಮಾರ್ಗ ತಪ್ಪಿ ಸ್ವರ್ಗ

ರಮಾನಂದನು ಈಚೆಗೆ ನಳಿನಿಯ ವರ್ತನಗಳಲ್ಲಿ ಹೆಚ್ಚುಹೆಚ್ಚಾದ ಉದಾಸೀನತೆಯ ಚಿಹ್ನೆಗಳನ್ನು ಕಾಣತೊಡಗಿದ್ದನು. ಹಾಗೆ ಕಾಣ ತೊಡಗಿದಂದಿನಿಂದಲೂ ಅವನು ತನ್ನ ಹೃದಯವನ್ನು ಅವಳಲ್ಲಿ ಒಮ್ಮೆಗೇ ಪೂರ್ತಿಯಾಗಿ ಬಿಚ್ಚಬೇಕೆಂದು, ಬಿಚ್ಚಿ, ಬಹಳ ಸಮಯ ದಿಂದ ತನ್ನನ್ನು ಕಾಡುತಿದ್ದ ಸಂಶಯವನ್ನು ನಿವಾರಿಸಿಕೊಳ್ಳಬೇಕೆಂದು ಯೋಚಿಸುತಿದ್ದನು. ಯಾವುದಾದರೂ ಒಂದು ಇತ್ಯರ್ಥಕ್ಕೆ ಕೂಡಲೇ ಬರಬೇಕು, ಬರುವುದು ಅತ್ಯಂತ ಅಗತ್ಯ,—ಎಂದು ಅವ ನಿಗೆ ಒಂದಕ್ಕಿಂತ ಹೆಚ್ಚು ಸಲ ತೋರಿತ್ತು. ಆದರೂ ಯಾವುದೋ ಒಂದು ಕಾಣದ ಕೈಯು ಅವನನ್ನು ಮುಂದೆ ಹೆಜ್ಜೆಯಿಡಲು ಸಂಕೋಚಪಡಿಸುತಿತ್ತು.

'ಆಶಾಪೂರ್ಣನಾಗಿ ಪ್ರಯಾಣ ಮಾಡುತ್ತಿರುವುದೇ ನಿಶ್ಚಿತ ಸ್ಥಾನವನ್ನು ಸೇರುವುದಕ್ಕಿಂತಲೂ ಉತ್ತಮ'* ಎಂದು ಕವಿ ಎಂದಿ ರುವನು. ಆದರೂ ರಮಾನಂದನ ಹೃದಯವು ಅದೇಕೋ ಆ ಸ್ಥಾನದ ಪ್ರಾಪ್ತಿಗಾಗಿ ಹೆಚ್ಚುಹೆಚ್ಚಾಗಿ ಹಾರೈಸತೊಡಗಿತು.

ರಮಾನಂದನ ಹೃದಯವು ಅಸಿಧಾರಾವ್ರತಕ್ಕೆ ಅನುಕೂಲ ವಾಗಿ ನಿರ್ಮಿಸಲ್ಪಟ್ಟಿರಲಿಲ್ಲ. ಹಾಗಾಗಿ ಅವನು ಈ ದಿನ ಭೀಷ್ಮ ಪ್ರತಿಜ್ಞೆ ತೊಟ್ಟನು: ನಳಿನಿಯ ಪರಿಗಣನೆಯಲ್ಲಿ ತಾನು ಎಲ್ಲಿ ನಿಂದಿರುವೆನೆಂಬುದು ಇಂದೇ ನಿರ್ಧಾರವಾಗಬೇಕು; ಇನ್ನು ತಾನು ಒಂದು ಕ್ಷಣವನ್ನಾದರೂ ಅನಿಶ್ಚಿತ ಪರಿಸ್ಥಿತಿಯಲ್ಲಿ ಕಳೆಯಲಾ ರೆನು,—ಎಂದು.

*'*To travel hopefully is better than to arrive.*'—Stevenson.

*         *         *         *

ರಮಾನಂದನು ಉಚ್ಚ ವಿದ್ಯಾಭ್ಯಾಸಕ್ಕಾಗಿ ಮಂಗಳೂರಿಗೆ ಬಂದಿದ್ದನು. ಅಲ್ಲಿ ಅವನು ತನ್ನ ಸೋದರಮಾವನ ಮಗಳಾದ ನಳಿನಿಯಲ್ಲಿ ಅನುರಕ್ತನಾಗಿದ್ದನು. ಅವಳ ಪ್ರೇಮವನ್ನು ಸಂಪಾದಿಸುವುದಕ್ಕಾಗಿ ಅವನು ಅವರಲ್ಲಿಗೆ ಹೋಗಿಬರುತ್ತಲಿದ್ದನು. ಆದರೆ ಮೊದಲಿನಿಂದಲೂ ನಳಿನಿಯಲ್ಲಿ ಅಂತಹ ಪ್ರೇಮಚಿಹ್ನೆಗಳಾವುವನ್ನೂ ಅವನು ಪ್ರಕಟವಾಗಿ ಕಂಡಿರಲಿಲ್ಲ.

ರಮಾನಂದನು ನಿತ್ಯವೂ ನಳಿನಿಯ ಮತ್ತು ಅವಳ ತಂಗಿ ಸರಸೆಯ ಕೂಡೆ ಮಾತುಕತೆ ನಡೆಸುತ್ತ ಸಮಯವನ್ನು ಸಂತೋಷದಿಂದ ಕಳೆಯುತ್ತಿದ್ದನು. ಆಗಲೆಲ್ಲ ನಳಿನಿಯು ಹೆಚ್ಚಾಗಿ ಆ ಸಂತೋಷದಲ್ಲಿ ಭಾಗ ವಹಿಸದೆ ಇರುತ್ತಿದ್ದಳು! ಇದು ಈಚೆಗೆ ರಮಾನಂದನನ್ನು ಎಷ್ಟೋ ಸಲ ಯೋಚನೆಗೆ ಈಡುಮಾಡಿತ್ತು. ಸರಸೆಯ ವಾಕ್ಚಾತುರ್ಯವು ಈವರೆಗೆ ನಳಿನಿಯ ಉದಾಸೀನತೆಯ ಮೇಲೆ, ಅವನಿಗೆ ತಿಳಿಯದಂತೆಯೆ, ಪರದೆಯಾಗುತ್ತಿತ್ತು! ಇದು ಹೇಗಾಯಿತೆಂಬುದು ರಮಾನಂದನಿಗೆ ಆಶ್ಚರ್ಯ ಉಂಟುಮಾಡಿತು.

*         *         *         *

ರಮಾನಂದನು ಯೋಚಿಸಿನೋಡಿದನು: ಸರಿ, ನಳಿನಿಯು ಯಾವಾಗಲೂ ಅವನ ಸಂಭಾಷಣೆಗಳಲ್ಲೆಲ್ಲ ಅಭಿರುಚಿಯಿಲ್ಲದವಳಾಗಿಯೆ ಇರುತ್ತಿದ್ದಳು. ಸರಸೆಯೆ ಪ್ರತಿಸಲವೂ ಅವುಗಳಲ್ಲಿ ಮುಖ್ಯ ಸ್ಥಾನವನ್ನು ನಿಪುಣತೆಯಿಂದ ಆಕ್ರಮಿಸಿಕೊಳ್ಳುತ್ತಿದ್ದಳು! ಇದು ಯೋಚಿಸಿದಂತೆ ಪರಿಷ್ಕಾರವಾಗಿ ತೋರತೊಡಗಿತು.

ಅವನು ನಳಿನಿಗೆಂದೇ ಕಾದಂಬರಿ ಮುಂತಾದುವನ್ನು ಓದಲು ತಂದುಕೊಡುತ್ತಿದ್ದನು. ಅವೆಲ್ಲ ಈಚೆಗೆ ಅವಳ ಕಟಾಕ್ಷವಿಕ್ಷೇಪದ ಸೌಭಾಗ್ಯವನ್ನು ಕೂಡ ಹೊಂದದೆ ಇರುತ್ತಿದ್ದುವು. ಸರಸೆಯಾದರೆ ಅವುಗಳನ್ನು ಆತುರದಿಂದ ಆಮೂಲಾಗ್ರವಾಗಿ ಓದಿ, ಕಲಿತು, ಅವ

ನೊಡನೆ ಅವುಗಳ ಟೀಕಾಟೂಕೆಯನ್ನು ಸಹ ಮಾಡುತ್ತಿದ್ದಳು! ಇದು ಅವನ ತಲೆಯೊಳಗೆ ಬರುತ್ತಲೇ ಅವನು ಸಹಿಸದಾದನು.

ಸಾಯಂಕಾಲ ರಮಾನಂದನು ನಳಿನಿ-ಸರಸೆಯರನ್ನು ಬೆಳದಿಂಗಳಲ್ಲಿ ಮನೆಯ ಉದ್ಯಾನದಲ್ಲಿ ತಿರುಗಾಡಲು ಆಗಿಂದಾಗ ಕರೆದುಕೊಂಡು ಹೋಗುತ್ತಿದ್ದನು. ಈಚೆಗೆ ಎಷ್ಟೋ ಸಲ ಹಾಗೆ ತಿರುಗಾಡಿಬರಲು ನಳಿನಿಯನ್ನು ಕೇಳಿಕೊಂಡರೆ, ಅವನ ಮಾತನ್ನು ಮಾನ್ಯಮಾಡಲು ಅವಳಿಗೆ ಸರಸೆಯ ಒತ್ತಾಯದ ಆವಶ್ಯಕತೆಯು ಉಂಟಾಗುತ್ತಿತ್ತು! ಇದರಲ್ಲಿ ಸಹ ರಮಾನಂದನಿಗೆ ಈಗ ಹೊಸ ಅರ್ಥವು ಹೊಳೆಯುತೊಡಗಿತು.

* * * *

ಈಚೆಗೆ, ಮಾತುಕತೆಯು ತೀರ ಭರದಲ್ಲಿ ಸಾಗುತ್ತಿದ್ದಾಗ ಕೂಡ, ನಳಿನಿಯು ಎಷ್ಟೊಂದು ಸಲ ಏನಾದರೂ ಕುಂಟು ನೆವ ಹೇಳಿ, ನಡುವಿನಿಂದ ಎದ್ದುಹೋಗಿ ತನ್ನ ಕೊಠಡಿಯನ್ನು ಸೇರಿರಲಿಲ್ಲ! ಎಷ್ಟೊಂದು ಸಲ ಬಳಿಯಲ್ಲಿದ್ದ ಏನಾದರೊಂದು ಪುಸ್ತಕವನ್ನು ಕೈಯಲ್ಲಿ ಎತ್ತಿಕೊಂಡು, ಅದರೊಳಗಿನ ವಿಷಯದಲ್ಲಿ ಲೀನಳಾದಂತೆ ನಟಿಸಿ, ಸಂಭಾಷಣೆಯಿಂದ ತಪ್ಪಿಸಿಕೊಂಡಿರಲಿಲ್ಲ! ರಮಾನಂದನು ನಳಿನಿಗೆ ಏನಾದರೊಂದು ಪ್ರಶ್ನೆ ಕೇಳಿದಾಗ, ಅವಳು ಹತ್ತಿರದಲ್ಲಿದ್ದ ಬೇರೆ ಯಾರೊಡನೆಯಾದರೂ ಮಾತಾಡುವ ಸೋಗಿನಿಂದ, ಎಷ್ಟೊಂದು ಸಲ ಅವನ ಪ್ರಶ್ನೆಯು ಕಿವಿಗೆ ಬಿದ್ದಿರದಂತೆ ತೋರಿಸಿಕೊಂಡಿರಲಿಲ್ಲ!

ಆದರೆ ಈವರೆಗೆ ನಳಿನಿಯು ಹಾಗೆ ಎದ್ದುಹೋದಾಗಲೆಲ್ಲ ಸರಸೆಯು ಸಂಭಾಷಣೆಯನ್ನು ನೀರಸವಾಗಗೊಡುತ್ತಿರಲಿಲ್ಲ; ಅದನ್ನು ಮತ್ತಷ್ಟು ಉಲ್ಲಾಸಕರ ರೀತಿಯಲ್ಲಿ ಮುಂದುವರಿಸುತ್ತಿದ್ದಳು! ನಳಿನಿಯು ಪುಸ್ತಕವನ್ನು ಓದುವುದರಲ್ಲಿ ಮಗ್ನಳಾದಾಗಲೆಲ್ಲ ತನ್ನ ವಾಕ್ಚಾತುರ್ಯದಿಂದ ರಮಾನಂದನ ಮನಸ್ಸನ್ನು ತನ್ನ ಕಡೆಗೇ

ಆಕರ್ಷಿಸಿಕೊಳ್ಳುತ್ತಿದ್ದಳು, ಮತ್ತು ನಳಿನಿಯ ಅನ್ಯಮನಸ್ಕತೆಯನ್ನು ಅವನ ಲಕ್ಷ್ಯಕ್ಕೆ ಬಾರದಂತೆ ಮಾಡುತಿದ್ದಳು! ನಳಿನಿಯು ರಮಾನಂದನ ಪ್ರಶ್ನೆಯನ್ನು ಅಲ್ಲಗಳೆದಾಗಲೆಲ್ಲ ತಾನೇ ಅದಕ್ಕೆ ಚಮತ್ಕಾರವಾಗಿ ತಕ್ಕ ಉತ್ತರವನ್ನು ಕೊಡುತಿದ್ದಳು, ಮತ್ತು ಅವನ ಮನಸ್ಸನ್ನು ಬೇರೆ ವಿಚಾರದ ಕಡೆಗೆ ಹರಿಯಿಸಿಬಿಡುತಿದ್ದಳು! ಇದನ್ನು ಯೋಚಿಸುತ್ತಲೇ ಸರಸೆಯ ಆ ಸರಸತೆ-ನಿಪುಣತೆಗಳಿಗಾಗಿ ರಮಾನಂದನು, ತನ್ನ ಆಗಿನ ಮನಃಸ್ಥಿತಿಯಲ್ಲಿ ಸಹ, ತಲೆದೂಗಿದನು.

*          *          *          *

ಇಷ್ಟಾದರೂ ನಳಿನಿಯ ಮನೋಭಾವದ ವಿಷಯದಲ್ಲಿ ರಮಾನಂದನು ಎಂತಹ ನಿರ್ಧಾರಕ್ಕೂ ಬಂದಿರಲಿಲ್ಲ. ಆದರೆ ಇತ್ತೀಚೆಯ ಕೆಲವು ಸಂದರ್ಭಗಳಲ್ಲಿನ ನಳಿನಿಯ ವರ್ತನವು ಅವಳ ಪ್ರೇಮಾಭಾವದ ವಿಷಯಕವಾದ ಸಂಶಯಗಳಿಗೆ ಆಸ್ಪದಕೊಟ್ಟಿತ್ತು. ಹೌದು, ಪ್ರೇಮಾಭಾವವಲ್ಲದಿದ್ದರೆ ನಳಿನಿಯು ಅದೇಕೆ ಈಗ ಅವನೊಡನೆ ಸಂಭಾಷಿಸುವ ಗೊಡವೆಗೇ ಬರುವುದಿಲ್ಲ? ರಮಾನಂದನು ಯಾವಾಗ ಬೇಕಾದರೂ ಹೋಗಿ ನೋಡಲಿ, ಅವಳು ತನ್ನ ಪಾಠ ಪುಸ್ತಕಗಳನ್ನು ಓದುವುದರಲ್ಲಿ ಮಗ್ನಳಾಗಿರುತಿದ್ದಳು, ಹಾರ್ಮೋನಿಯಮ್ ಬಾರಿಸುವುದರಲ್ಲಿ ಲೀನಳಾಗಿರುತಿದ್ದಳು, ಇಲ್ಲವೇ, ಚಿಕ್ಕ ತಮ್ಮನನ್ನು ಆಡಿಸುವುದರಲ್ಲಿ ಲೋಲಳಾಗಿರುತಿದ್ದಳು; ಹಾಗಲ್ಲದೆ ಅವನ ಕಡೆಗೆ ಲಕ್ಷ್ಯವನ್ನೇ ಕೊಡುತ್ತಿರಲಿಲ್ಲ! ಇದನ್ನು ನೋಡಿದರೆ, ಪ್ರೇಮಾಭಾವವಲ್ಲದೆ ಬೇರೊಂದನ್ನು ಗ್ರಹಿಸಲು ಅವಕಾಶವಿದೆಯೆ?

ನಳಿನಿಯ ಇಂತಹ ನಡತೆಯು ರಮಾನಂದನ ಮನಸ್ಸಿಗೆ ಈಟಿಯಂತೆ ನಾಟಿತ್ತು.

ಸರಸೆಯ ಮಾತುಕತೆಗಳಂತೂ ಈಗ ಮುಂಚಿನಂತೆಯೆ ಸಾಗುತಿದ್ದುವು. ಆದರೂ ಅವು ರಮಾನಂದನಿಗೆ ಹಿಂದಿನ ಉಲ್ಲಾಸವನ್ನು ಕೊಡಲು ಅಶಕ್ತವಾಗತೊಡಗಿದ್ದುವು.

* * * *

ನಳಿನಿಯ ವರ್ತನದಿಂದ ರಮಾನಂದನ ಹೃದಯುಕ್ಕೆ ದೊರೆತ ಲಾಘವವು ಅವನನ್ನು ಬಹಳ ರೀತಿಯಿಂದ ಕಾಡುತಿತ್ತು; ಹಗಲೂ ಇರುಳೂ ಅವನ ಹೃದಯುದಲ್ಲಿ ಪ್ರಚಂಡವಾದ ಬಿರುಗಾಳಿಯನ್ನು ಎಬ್ಬಿಸುತಿತ್ತು; ಅಗಾಧವಾದ ಅಲ್ಲೋಲ-ಕಲ್ಲೋಲವನ್ನು ಉಂಟು ಮಾಡುತಿತ್ತು.

ಈಗ ಅವನ ಮನಸ್ಸು ಯಾವಾಗಲೂ ಅನ್ಯಾಕ್ರಾಂತವಾಗಿ ರುತಿತ್ತು. ಹೀಗಾಗಿ ಅವನಿಗೆ ಸರಸೆಯ ಸಲ್ಲಾಪದಲ್ಲಿ ಮೊದ ಲಿನ ಆಸಕ್ತಿಯು ತಪ್ಪಿತ್ತು. ಈಗ ಅವನು ಅವಳೊಡನೆ ಸಂಭಾ ಷಣೆಯ ನಟನೆಯನ್ನಷ್ಟೆ ಮಾಡುತಿದ್ದನು. ಕಾರಣ: ಈ ನೆವದಿಂದ ಲಾದರೂ ಅವನು ನಳಿನಿಯನ್ನು ನೋಡುತ್ತಲಿರಬಹುದಲ್ಲವೇ? ಅವಳ ಸ್ವರವನ್ನು ಆಲಿಸುತ್ತಲಿರಬಹುದಲ್ಲವೇ? ಅವಳೊಡನೆ ಒಂದೆರಡು ಮಾತನ್ನಾದರೂ ಆಡುತ್ತಲೂ ಇರಬಹುದಲ್ಲವೇ?

* * * *

ರಮಾನಂದನ ಸಂಭಾಷಣೆಯು ಈಚೀಚೆಗೆ ಬಹಳ ನೀರಸ ವಾಗಿಬಂದಿತ್ತು. ಈ ನಿಸ್ಸಾರವಾದ ಮಾತುಕತೆಯಿಂದ ಸರಸೆಯೂ ಸಹ ಬೇಸರಪಡುತಿದ್ದಳು; ಕೊನೆಗೆ, ಮಾತಿನ ನಡುವೆಯೆ ಸುಮ್ಮ ನಾಗಿಬಿಡುತಿದ್ದಳು. ಹೀಗಾಗಿ, ಒಂದೊಂದು ಸಲ ಮೂವರೂ ಮೌನವಾಗಿಯೆ ಕುಳಿತುಬಿಡುತಿದ್ದರು.

ಇಂತಹ ಸಂದರ್ಭದಲ್ಲಿ ರಮಾನಂದನು ದೂರದ ಆಕಾಶ ವನ್ನೇ ದಿಟ್ಟಿಸುತ್ತ ಇದ್ದುಬಿಡುವನು. ಆಗ ಅವನ ಮನಸ್ಸು ದಿಕ್ಕು ಕಾಣದೆ ಎತ್ತೆತ್ತಲೋ ಅಲೆಯುತ್ತಿರುವುದು; ಕೊನೆಗೆ ಎಷ್ಟೋ ಯೋಜನ ದೂರದ ಚಂದ್ರಲೋಕದ ಶೀತಲತೆಯುಲ್ಲಿ ಮೆರೆಯು ವುದು; ನಕ್ಷತ್ರಪುಂಜಗಳ ಶಾಂತತೆಯುಲ್ಲಿ ನೆರೆಯುವುದು; ಆಕಾಶ ದಾಚೆಯ ಶೂನ್ಯತೆಯುಲ್ಲಿ ಬೆರೆಯುವುದು.

೨

ರಿಂದಿನ ಸಾಯಂಕಾಲ ರಮಾನಂದನು ಬಹಳ ಉತ್ಸಾಹದಿಂದ ಅವರಲ್ಲಿಗೆ ಬಂದಿದ್ದನು. ನಳಿನಿಯ ಮನಸ್ಸನ್ನು ತನ್ನ ಕಡೆಗೆ ಆಕರ್ಷಿಸುವುದಕ್ಕಾಗಿ ಎಷ್ಟೋ ಹೊಸ ಸಂಗತಿಗಳನ್ನು ಹೇಳಬೇಕೆಂದು ನಿಶ್ಚಯಿಸಿದ್ದನು. ಅವನು ಬಂದು ಸರಸೆಯೊಡನೆ ಸಲ್ಲಾಪಿಸುತ್ತ ಎಷ್ಟೋ ಸಮಯ ಕಳೆದನು; ಆದರೂ ನಳಿನಿಯ ಸುಳಿವಾದರೂ ಎಲ್ಲಿ?

ನಳಿನಿಯು ಒಳಗೆ ಯಾವುದನ್ನೋ ಓದುವುದರಲ್ಲಿ, ಯಾವುದನ್ನೋ ಬರೆಯುವುದರಲ್ಲಿ, ಮೈಮರೆತು ಕುಳಿತಿದ್ದಳು. ರಮಾನಂದನಿಗೆ ಕೂತಲ್ಲಿಂದಲೇ ಅದು ತೋರುತಿತ್ತು. ದೀಪದ ಬೆಳಕಿನಲ್ಲಿ ಮೇಜಿನ ಬಳಿ ಕುರ್ಚಿಯ ಮೇಲೆ ಕುಳಿತಿದ್ದ ಅವಳ ಪಾರ್ಶ್ವದೃಶ್ಯವು ಬಹಳ ಮನೋಹರವಾಗಿ ಕಾಣುತಿತ್ತು.

ರಮಾನಂದನು ಪ್ರತಿಕ್ಷಣವೂ ಅವಳ ಬರವನ್ನು ನಿರೀಕ್ಷಿಸುತ್ತ ಹೊರಗೆ ಕುಳಿತನು. ಆಗಿಂದಾಗ ನಳಿನಿಯ ಕಡೆಗೆ ನೋಡುತ್ತ ಸರಸೆಯೊಡನೆ ನೀರಸವಾದ ಸಂಭಾಷಣೆ ನಡೆಯಿಸಿದನು. ಅವನ ಮನಸ್ಸಿನೊಳಗೆ ವಿಷಯಗಳು ಉಕ್ಕೇರಿಬರುತ್ತಿದ್ದುವು. ಅಃ! ಅವುಗಳನ್ನು ನಳಿನಿಯೊಡನೆ ಹೇಳಬೇಕೆಂದು ರಮಾನಂದನ ಮನಸ್ಸು ಎಷ್ಟು ಲವಲವಿಸಿತು!

ಆದರೆ, ಹಾ! ಅವಳ ಓದು-ಬರವಣಿಗೆಗಳು ಇನ್ನೂ ಮುಗಿಯುವಂತೆ ತೋರಲೊಲ್ಲದು. ಇದೇನು, ನಳಿನಿಗೆ ಬ್ರಹ್ಮನ ಕರಣೀಕತನವೇ ದೊರೆತಿರುವುದೇ?

* * * *

ಶಾಲೆಗಳೆಂಬ ಕಾರಾಗೃಹಗಳು, ಈ ಮಾನವರ ಪಂಜರಗಳು, ಯಾಕೆ ಸೃಷ್ಟಿಸಲ್ಪಟ್ಟುವೊ!

ಎಷ್ಟೊಂದು ಮಂದಿ ತರುಣ-ತರುಣಿಯರು ಅವುಗಳಲ್ಲಿ ಬಿದ್ದು ನಾರುವರು! ತಮ್ಮ ಜೀವನದ ಅತ್ಯಮೂಲ್ಯವಾದ ದಿನಗಳನ್ನು ವ್ಯರ್ಥಪಡಿಸುತ್ತಿರುವರು! ಅವರ ಯೌವನವು ಸುಮ್ಮನೆ ಹಾಳಾಗುತ್ತಿರುವುದಲ್ಲ, ಬರೀ ಕಾನನದ ಬೆಳದಿಂಗಳಿನಂತೆ!—ಕಾಡಿನಲ್ಲಿನ ಹೂವಿನಂತೆ!—ಮರುಭೂಮಿಯಲ್ಲಿನ ಮಳೆಯಂತೆ! ಇಂತಹ ಕೃತಕಜೀವನದಿಂದ ಈ ಪ್ರಪಂಚಕ್ಕೆ ಎಷ್ಟೊಂದು ಪ್ರಕೃತಿದತ್ತವಾದ ಸಂತೋಷವು ನಷ್ಟವಾಗುತ್ತಿದೆ!—ರಮಾನಂದನ ಮನಸ್ಸು ಬಹಳ ತಳಮಳಿಸಿತು.

"ನಳಿನಿ, ನಿನ್ನ ಯೌವನ-ಕುಸುಮವನ್ನು ಈ ಕೊಠಡಿಯ ಮೂಲೆಯಲ್ಲಿಯೆ ಬಾಡಿಸುವಿಯಾ? ಬಿಡು, ಹೊರಗೆ ಬಾ,—ಇಲ್ಲಿ ಎಷ್ಟೊಂದು ನಿರ್ಮಲವಾದ ಸಂತೋಷವು ನಮ್ಮನ್ನು ಕಾಯುತ್ತಿರುವುದು ನೋಡು!"—ಹೀಗೆಂದು ಅವಳನ್ನು ಹೊರಗೆ ಎಳೆದು ತರಬೇಕೆಂದು ಅವನಿಗೆ ಅತ್ಯಂತ ಆತುರವಾಯಿತು. ಆದರೆ ಅದಕ್ಕೆ ಆಚಾರಪಾಶಗಳ ಬಂಧನವು ಎಂತಹ ಕ್ರೂರವಾದ ಆತಂಕವಾಗಿತ್ತು!

ಇದೊಂದು ಪ್ರಸಂಗದಿಂದಲೇ ಮನುಷ್ಯನ ಇಷ್ಟಪ್ರಾಪ್ತಿಯ ಅಸಾಧ್ಯತೆ, ಆಶಾಭಿಕಾಂಕ್ಷೆಗಳ ನಿಷ್ಪ್ರಯೋಜಕತೆ, ಸುಖಸಂತೋಷಗಳ ಕ್ಷಣಭಂಗುರತೆ,—ಇವು ರಮಾನಂದನ ಮನಸ್ಸಿಗೆ ಹೊಳೆದುವು; ಅವನ ಹೃದಯವು ವೇದನೆಯಿಂದ ತುಂಬಿಹೋಯಿತು.

* * * *

ಆಗಲೇ ಒಳಗಿನಿಂದ ಹಾರ್ಮೋನಿಯಮ್ಮಿನಲ್ಲಿ ಉದ್ಗಾರಗಳು ಕೇಳಿಬರತೊಡಗಿದುವು. ಅವು ಹೃದಯದ್ರಾವಕವಾಗಿದ್ದುವು. ಹಾರ್ಮೋನಿಯಮ್ಮಿನ ಸ್ವರದೊಡನೆ ಇಂಪಾದ ದನಿಯಲ್ಲಿ ಹಾಡೂ ಹೊರಟಿತು:

"ಹಾ! ಪ್ರಿಯಾ! ಪ್ರಶಾಂತ ಹೃದಯಾ!
ಹಾನಿ ಹೊಂದಿದೆಯಾ!"

ಹಾಡು ಬಹಳ ದುಃಖಪೂರ್ಣವಾಗಿತ್ತು. ಅದು ಲಹರಿ ಲಹರಿಯಾಗಿ ರಮಾನಂದನ ಹೃದಯವನ್ನು ಪ್ರವೇಶಿಸಿತು; ಅಲ್ಲಿ ವೇದನೆಯ ತರಂಗ-ತರಂಗಗಳನ್ನು ಎಬ್ಬಿಸಿತು, ಕಣ್ಣಿನ ಮೂಲಕ ನೀರಾಗಿ ಹರಿಯಿಸಿತು.

ಕೈಯ ಮೇಲೆ ಉದುರಿದ ಬಿಸಿಬಿಸಿಯಾದ ಕಂಬನಿಯ ತಟಕು ಗಳು ರಮಾನಂದನನ್ನು ಯೋಚನಾಸಾಮ್ರಾಜ್ಯದಿಂದ ಎಚ್ಚರಗೊಳಿ ಸಿದುವು; ಅವನು ತಬ್ಬಿಬ್ಬಾಗಿ ಅತ್ತಿತ್ತ ನೋಡಿದನು; ಬಳಿಯಲ್ಲಿ ಯಾರೂ ಇರಲಿಲ್ಲ. ನಳಿನಿಯು ಇನ್ನೂ ಅಲ್ಲಿಯೆ ಕುಳಿತು ಓದಿ ನಿಂದ ಮೆದುಳನ್ನು ಹೊರಮೂದಿಸಿಕೊಳ್ಳುತಿದ್ದಳು; ಸರಸೆಯು ಯಾವಾಗ ಅವನ ಮುಂದಿನ ಕುರ್ಚಿಯ ಮೇಲಿಂದ ಎದ್ದು ಹೋಗಿದ್ದಳೋ ಅವನಿಗೆ ತಿಳಿಯದು.

ಹಾಡು ಹೊರಸೂಸುತಿದ್ದ ವೇದನೆಯು ಸಹನಾತೀತವಾ ಯಿತು. ರಮಾನಂದನು ಮೆಲ್ಲಗೆ ಎದ್ದನು; ಭಾರವಾದ ಹೆಜ್ಜೆ ಗಳಿಂದ ಹೊರಗೆ ಹೋದನು. ಉದ್ಯಾನವನ್ನು ಹೊಕ್ಕು, ಅಲ್ಲಿ ಕಂಡುಬಂದ ಮೊದಲನೆಯ ಶಿಲಾಸನದ ಮೇಲೆಯೆ ತನ್ನ ದೇಹದ ಭಾರವನ್ನೆಲ್ಲ ಹಾಕಿ ಕುಳಿತುಬಿಟ್ಟನು.

ಬೆಳದಿಂಗಳು ಹಿಟ್ಟುಚೆಲ್ಲಿದಂತೆ ಹರಡಿತ್ತು. ಸುತ್ತಲೂ ಹೂವಿನ ಗಿಡಬಳ್ಳಿಗಳು ಎಣೆಯಿಲ್ಲದ ಸೊಬಗನ್ನು ಬೀರುತಿದ್ದುವು. ಗಾಳಿಯು ನಾನಾ ತರದ ಹೂಗಳ ಪರಿಮಳದಿಂದ ಘಮಘಮಿಸು ತಿತ್ತು. ಇವೆಲ್ಲ, ಇತರ ಸಮಯಗಳಲ್ಲಿಯಾದರೆ, ರಮಾನಂದನನ್ನು ಆನಂದಸಾಗರದಲ್ಲಿ ತೇಲಿಸಬಲ್ಲುವಾಗಿದ್ದುವು. ಈಗ ಮಾತ್ರ ಅವನ ಮನಸ್ಸಿನ ಮೇಲೆ ಅವು ಸ್ವಲ್ಪವೂ ಪರಿಣಾಮ ಉಂಟು ಮಾಡಲು ಸಮರ್ಥವಾಗಲಿಲ್ಲ.

ದೂರದಿಂದ ಹಾಡು ಇನ್ನೂ ಸ್ಪಷ್ಟವಾಗಿ ಕೇಳಿಬರುತಿತ್ತು:

"ಅರಸಿಯನ್ನು ಮರೆತು, ಹೀಗೆ,
ತೊರೆದು ಪೋಗುವುದೇ? ಪ್ರಿಯಾSSS!"

ಅತ್ಯಪರಿಮಿತವಾದ ಸಂಕಷ್ಟದಿಂದ ನರಳುತ್ತಿದ್ದ ಆತ್ಮವೇ ಸಹಿಸಲಾರದೆ ಮೊರೆಯಿಡುತ್ತಿರುವಂತೆ ಭಾಸವಾಯಿತು. ರಮಾನಂದನ ಆತ್ಮವೂ ಸ್ವಾಭಾವಿಕವಾಗಿಯೆ ಆ ಆತ್ಮದೊಡನೆ ಸಹಕರಿಸಿತು; ಅವನು ಸಹಜವಾಗಿಯೆ ತಾನೂ ಆ ಹಾಡಿನೊಂದಿಗೆ ಕಂಠ ಸೇರಿಸಿ ಸಣ್ಣ ಸ್ವರದಲ್ಲಿ ಹಾಡತೊಡಗಿದನು. ಎರಡು ದುಃಖಿತ ಆತ್ಮಗಳೂ ಒಂದೇ ಸ್ವರದಲ್ಲಿ, ಒಟ್ಟಿಗೇ, ಮೊರೆಯಿಟ್ಟುವು:

"ಏನ ಗೈವೆ! ಪ್ರಾಣಕಾಂತಾ!
ಹಾನಿ ಹೊಂದಿದೆಯಾ? ಪ್ರಿಯಾSSS!
ಹಾ! ಪ್ರಿಯಾ! ಪ್ರಶಾಂತ ಹೃದಯಾ!
ಹಾನಿ ಹೊಂದಿದೆಯಾ!"

ರಮಾನಂದನ ಗಂಟಲು ಬಿಗಿದಂತಾಯಿತು; ಎದೆಯು ಬಿರಿದಂತಾಯಿತು. ಅವನು ಕೈಗಳನ್ನು ಶಿಲಾಸನದ ಒರಗಿನ ಮೇಲೆ ನೀಡಿದನು; ಮುಖವನ್ನು ಅವುಗಳ ಮೇಲೆ ಅಡಗಿಸಿದನು; ಸಣ್ಣ ಮಗುವಿನಂತೆ ಬಿಕ್ಕಳಿಸತೊಡಗಿದನು; ಅವನನ್ನೇ ಕೊಚ್ಚಿಕೊಂಡು ಹೋಗುವಷ್ಟು ಕಣ್ಣೀರ ಕೋಡಿ ಹರಿಯಿತು.

* * * *

ಈ ಘಟನೆಯೆ ರಮಾನಂದನ ಕಣ್ಣುಗಳನ್ನು ಪೂರ್ತಿಯಾಗಿ ತೆರೆಯಿಸಿತು; ಅವನ ವಿಚಾರಶಕ್ತಿಗೆ ಕೆಲಸ ಕೊಟ್ಟಿತು; ನಳಿನಿಯಲ್ಲಿಗೆ ಹೋಗತೊಡಗಿದಂದಿನಿಂದ ನಡೆದುದೆಲ್ಲದರ ಸಿಂಹಾವಲೋಕನ ಮಾಡಿಸಿತು.

ಇದೇ ರಮಾನಂದನ ಇಂದಿನ ಭೀಷ್ಮಪ್ರತಿಜ್ಞೆಗೆ ಕಾರಣವಾಯಿತು. ಅಂತೂ ನಳಿನಿಯ ಪ್ರೇಮಭಿಕ್ಷೆಯನ್ನು ಬೇಡುವುದೇ ಇನ್ನು ತನಗೆ ಉಳಿದ ಒಂದೇ ಉಪಾಯವೆಂದು ಅವನಿಗೆ ಖಚಿತ

ವಾಯಿತು; ಅದನ್ನು ಇಂದೇ ಕೈಕೊಳ್ಳುವೆನೆಂದೂ ಅವನು ದೃಢವಾಗಿ ನಿರ್ಧರಿಸಿದನು.

೩

ಈ ದಿನ ಸಾಯಂಕಾಲ ರಮಾನಂದನು ಹೋದಾಗ ಹೊರ ಚಾವಡಿಯಲ್ಲಿ ನಳಿನಿಯಾಗಲಿ, ಸರಸೆಯಾಗಲಿ ಕಂಡುಬರಲಿಲ್ಲ. ಮೇಜು-ಕುರ್ಚಿಗಳೆಲ್ಲ ಬರಿದಾಗಿಯೆ ನಿಂತಿದ್ದುವು. ರಮಾನಂದನು ಉದ್ಯಾನಕ್ಕೆ ಹೋಗಿ ಅತ್ತಿತ್ತ ಅಲೆದಾಡತೊಡಗಿದನು, ತನ್ನ ಮನಸ್ಸನ್ನು ಸ್ತಿಮಿತಕ್ಕೆ ತರಲೆಂದು.

*   *   *   *

ಪ್ರಕೃತಿಯು ಸ್ನಿಗ್ಧ ಸೌಂದರ್ಯದಿಂದ ಮನಸೆಳೆಯುವಂತಿದ್ದಳು. ಬೆಳ್ಳನೆ ಬೆಳಗುವ ಆ ಬೆಳದಿಂಗಳೇನು! ಸುಯ್ಯನೆ ಸುಳಿಯುವ ಆ ತಂಗಾಳಿಯೇನು! ಬಿಮ್ಮನೆ ಬೀಸುವ ಆ ಹೂಗಂಪೇನು!

ಅವನ ಬಾಯಿಯಿಂದ, ತಾನು ಎಷ್ಟೋ ಸಲ ಹಾಡಿದ್ದ ಆ ಮುದ್ದು ಹಾಡು, ಸಣ್ಣ ದನಿಯಲ್ಲಿ ಹೊರಟಿತು:

*"ಮಂಜುಳ ನಿಶಿ, ಮಂಜುಳ ಶಶಿ,
ಮಂಜುಳ ದಿಶಿ, ನೋಡು ಬಾ!
ತನುಸೊಂಪನು, ದನಿಯಿಂಪನು,
ಮನಗಂಪನು, ನೀಡು ಬಾ!
ಕೂಡು ಬಾ! ಹಾಡು ಬಾ!
ಬೇಗ ಬಾ! ಬಾ! ಬಾ!"

ಹಾಡನ್ನು ನಿಲ್ಲಿಸಿ ನೀರವವಾಗಿ ಅತ್ತಿತ್ತ ಹೆಜ್ಜೆ ಇಡಹತ್ತಿದನು.

ಸ್ವಲ್ಪ ಸಮಯದಲ್ಲಿಯೆ ರಮಾನಂದನಿಗೆ ಹತ್ತಿರದಿಂದಲೇ, ತಾನು ಹಾಡಿದ ರಾಗದ ಹಾಡೇ, ಇಂಪಾದ ಸ್ವರದಲ್ಲಿ ಕೇಳಿಬರತೊಡಗಿತು:

*With apologies to Sri K. V. Puttappa, M. A.

"ಜೊತೆಯಿಲ್ಲದೆ ನನ್ನೊಳಿದೆದೆ
ಕಂಪಿಸುತಿದೆ, ಕೂಡು ಬಾ!
ಹೊಸ ಹಸುರೆಡೆ, ತಿಳಿಗೊಳದೆಡೆ,
ನಾ ನಿನ್ನೆಡೆ, ನೀನೆನ್ನೆಡೆ!
ಕೂಡು ಬಾ, ಹಾಡು ಬಾ!
ಬೇಗ ಬಾ! ಬಾ! ಬಾ!"

ರಮಾನಂದನು ತಟಸ್ಥನಾಗಿ ಅತ್ತ ತಿರುಗಿ ನೋಡಿದನು. ಅಲ್ಲಿಯೆ ಕೆರೆಯ ಪಾವಟಿಗೆಗಳ ಮೇಲೆ ತನ್ನ ಮನೋದೇವಿ! ಪ್ರತ್ಯಕ್ಷಳಾಗಿ ಕುಳಿತಿದ್ದಳು! ಆ ಮೂರ್ತಿಯನ್ನು ಯಾವಾಗಲಾದರೂ ಗುರುತಿಸದಿರಲು ಸಾಧ್ಯವಿದೆಯೆ? ಆ ಸೌಂದರ್ಯಭರಿತವಾದ ಮುಖಕಮಲವು ಈ ದಿನವೇನೋ ಮತ್ತಷ್ಟು ಮನೋಹರವಾಗಿ ರಂಜಿಸುತಿತ್ತು. ಆ ಮುಂಗುರುಳುಗಳ ಬೆಡಗು, ಆ ಕಣ್ಣುಗಳ ಸೊಬಗು, ಆ ಮೈಯ ಮಿರುಗು,—ಎಲ್ಲವೂ ವಿಚಿತ್ರವಾಗಿದ್ದುವು. ಅವಳ ಆಗಿನ ಲಾವಣ್ಯವು ರಮಾನಂದನನ್ನು ಪೂರಾ ಮುಗ್ಧನಾಗಿ ಮಾಡಿತು. ಅವನು ಅವಳನ್ನೇ, ನೆಟ್ಟ ದೃಷ್ಟಿಯಿಂದ, ನೋಡತೊಡಗಿದನು. ನೋಡುನೋಡುತ್ತ, ಆ ಸೌಂದರ್ಯಸಾರವನ್ನು ಮನದಣಿಯೆ ಹೀರತೊಡಗಿದನು; ಆ ಚೆಲುವಿನ ಹೊನಲಿನಲ್ಲಿ ತನುದಣಿಯೆ ಈಜಾಡಹತ್ತಿದನು.

* * * *

ಹಠಾತ್ತಾಗಿ ರಮಾನಂದನು ಬೆಕ್ಕಸಬೆರಗಾದನು: ಇದೇನು! ಅವಳು ಅದೇಕೆ ತನ್ನ ಮುಖವನ್ನು ಆಕಸ್ಮಿಕವಾಗಿ ಕೈಬೊಗಸೆಯಲ್ಲಿ ಅಡಗಿಸಿದಳು? ಏನು, ಬಿಕ್ಕಳಿಸುತ್ತಲೂ ಇರುವಳೇ? ಈ ಚೆಲುವಿನ ಚಿಲುಮೆಗೂ ಸುಯಿಲಿನ ಹೊಯಿಲೇ?

ರಮಾನಂದನು ಎದ್ದು, ಮೆಲ್ಲಗೆ ಅವಳ ಬಳಿಗೆ ಹೋದನು; ಅವಳ ಲಕ್ಷ್ಯವು ಅವನ ಕಡೆಗೆ ಹರಿಯಲಿಲ್ಲ. ರಮಾನಂದನು

ಮೆಲ್ಲಮೆಲ್ಲನೆ ಅವಳ ಕಾಲಬಳಿಯಲ್ಲಿ ಹೋಗಿ ಕೂತನು; ಅವಳು ಮತ್ತೂ ಮುಖವನ್ನು ಎತ್ತಲಿಲ್ಲ. ರಮಾನಂದನು ಅಲ್ಲಿಯೆ ಮೊಣಕಾಲು ಊರಿಕೊಂಡು ಬಾಗಿದನು. ಅವನಿಗೆ ಭಾವಪ್ರವಾಹವು ಉಕ್ಕಿಬಂತು; ಅವನು ಫಕ್ಕನೆ ಅವಳ ಪಾದಗಳನ್ನು ಎರಡೂ ಕೈಗಳಿಂದ ಬಹಳ ಮೃದುವಾಗಿ ಸ್ಪರ್ಶಿಸಿ, ತನ್ನ ಮುಖದಿಂದ ಅವುಗಳನ್ನು ಮುಚ್ಚಿಬಿಟ್ಟನು. ಅವನ ಕಣ್ಣುಗಳಿಂದ ನೀರು, ಕಾಲುವೆಯಾಗಿ ಹರಿದು, ಅವಳ ಕಾಲುಗಳನ್ನು ತೊಯಿಸಿಬಿಟ್ಟಿತು.

*　　*　　*　　*

ಒಡನೆ ಅವಳು ದಿಗಿಲುಗೊಂಡವಳಂತೆ ಎದ್ದುನಿಂತಳು. ತನ್ನ ಕಾಲುಗಳನ್ನು ಬಿಡಿಸಿಕೊಳ್ಳಲು ಪ್ರಯತ್ನ ಮಾಡಿದಳು. ಆದರೆ ರಮಾನಂದನು ಆಗ ಅವುಗಳನ್ನು, ತನ್ನ ಪ್ರಾಣವೇ ಎಂಬಂತೆ, ಮತ್ತಷ್ಟು ಬಿಗಿಯಾಗಿ ಹಿಡಿದುಕೊಂಡನು.

"ನನ್ನ ಜೀವನಸರ್ವಸ್ವ!....ನಿನ್ನ ಪ್ರೇಮಭಿಕ್ಷೆಯಿಂದ....ನನ್ನ ಪ್ರಾಣದಾನ....ಮಾಡಲಾರೆಯಾ?" ಎಂದು ರಮಾನಂದನು ಬಿಕ್ಕುತ್ತ ಬಿಕ್ಕುತ್ತ ಮೊರೆಯಿಟ್ಟನು.

ಮರುಕ್ಷಣದಲ್ಲಿಯೆ ತಾವರೆಯ ದಂಟಿನಂತಹ ಎರಡು ತೋಳುಗಳು ರಮಾನಂದನ ಕೊರಳನ್ನು ಮಿಂಚಿನ ವೇಗದಲ್ಲಿ ಬಿಗಿದುವು; ಗುಲಾಬಿಯ ಎಸಳಿನಂತಹ ಎರಡು ತುಟಿಗಳು ಅವನ ಹಣೆಯ ಮೇಲೆ ಸಮ್ಮತಿಯ ಮುದ್ರೆಯನ್ನು ಒತ್ತಿದುವು! ಅವನು ಸ್ವರ್ಗಲೋಕದ ಸುಖವನ್ನು ಅನುಭವಿಸಿದನು.

*　　*　　*　　*

ರಮಾನಂದನು ಸರಿಯಾಗಿ ಎದ್ದುನಿಲ್ಲುವುದರಲ್ಲಿದ್ದನು; ಅಷ್ಟರಲ್ಲಿ, ಅವನ ಕೊರಳು ತನ್ನ ಬಂಧನದಿಂದ ಬಿಡುಗಡೆ ಹೊಂದಿತು. ರಮಾನಂದನು ತನ್ನ ಸುಖಸ್ವಪ್ನದಿಂದ ಎಚ್ಚರವಾಗಿ

ಮುಂದೆ ನೋಡುವುದರಲ್ಲಿದ್ದನು; ಅಷ್ಟರಲ್ಲಿ, ಅವನ ಅಧಿಷ್ಠಾತ್ರಿಯು ಲಜ್ಜೆಯಿಂದ ಆಚೆಗೆ ಓಡಲು ಕಾಲೆತ್ತಿದಳು. ಅವನು ಫಕ್ಕನೆ ಹಾರಿ, ಅವಳ ಕೈಯನ್ನು ಗಟ್ಟಿಯಾಗಿ ಹಿಡಿದುಕೊಂಡನು; ಅವಳ ತಗ್ಗಿಸಿದ ಮುಖವನ್ನು ತನ್ನ ಕಡೆಗೆ ತಿರುಗಿಸಿದನು.

ಒಡನೆ ರಮಾನಂದನು ಹೌಹಾರಿ ಅವಳನ್ನು ಬಿಟ್ಟುಬಿಟ್ಟನು.

“ಇದೇನು! ಸರಸೆ!”

ರಮಾನಂದನು ಆಶ್ಚರ್ಯದಿಂದ ತಬ್ಬಿಬ್ಬಾದನು; ಸ್ವಲ್ಪ ಸಮಯದ ವರೆಗೆ ಸರಸೆಯನ್ನೇ ಮೇಲೆ ಕೆಳಗೆ ದಿಟ್ಟಿಸಿನೋಡಿದನು.

* * * *

ಸರಸೆಯು ರಮಾನಂದನ ಈ ವರ್ತನದ ಅರ್ಥವನ್ನು ತಿಳಿಯಲಾರದಾದಳು. ಅವಳು ಅವಾಕ್ಕಾಗಿ ನಿಂತುಬಿಟ್ಟಳು. ಅವಳ ತುಂಬಿಗಣ್ಣುಗಳು ತುಂಬಿಬಂದುವು; ಅವಳ ಚೆಂದುಟಿಗಳು ಅದುರಿದುವು. ಅವಳ ಮುಖದ ಮೇಲಿಂದ ಸಂತೋಷ, ಲಜ್ಜೆ, ಅಂಜಿಕೆ, ಗಲಿಬಿಲಿ ಮುಂತಾದ ಭಾವಗಳು ಹಾಯ್ದುಹೋಗುತ್ತ ಅದಕ್ಕೆ ಒಂದು ಅಪೂರ್ವ ಶೋಭೆಯನ್ನು ಕೊಟ್ಟುವು.

ರಮಾನಂದನು ಆಗಲೇ ಮನಗಂಡನು, ಅವಳಲ್ಲಿ ನಳಿನಿಯನ್ನೂ ಹಿಂದಿಕ್ಕುವಷ್ಟು ಸೌಂದರ್ಯವಿರುವುದೆಂದು! ಪ್ರತಿಯೊಂದರಲ್ಲಿಯೂ ನಳಿನಿಯನ್ನು ಮಿಗಿಸುತ್ತಿದ್ದಳು, ಈ ಸರಸೆ. ನಳಿನಿಯ ಮೇಲಿನ ಪಕ್ಷಪಾತವೇ ಸರಸೆಯ ವಿಷಯದಲ್ಲಿ ತನ್ನನ್ನು ಕುರುಡನಾಗಿ ಮಾಡಿದ್ದುವು. ಇದಕ್ಕಾಗಿ ಅವನು ತನ್ನನ್ನು ತಾನೇ ಹಳಿದುಕೊಂಡನು.

* * * *

ರಮಾನಂದನ ಕಣ್ಣ ಮುಂದಿನ ಪರದೆಯು ಇಡಿಯೆ ಜಾರಿತು: ಸರಸೆಗೆ ಮೊದಲಿನಿಂದಲೂ ತನ್ನಲ್ಲಿ ಪ್ರೇಮವಿದ್ದುದು ಆತನಿಗೆ ಕ್ರಮೇಣ ಸ್ಪಷ್ಟವಾಗಿ ಮನದಟ್ಟಾಯಿತು.

"ನೀವು ಅಕ್ಕನನ್ನೇ ಪ್ರೀತಿಸುವಿರೆಂದು ತಿಳಿದಿದ್ದೆ!" ಸರಸೆಯು, ಮೌನವನ್ನು ಸಹಿಸಲಾರದೆ, ಎಂದಳು.

"ಆದರೆ, ಸರಸೆ! ಈಗ ನಿನ್ನನ್ನೇ ಪ್ರೀತಿಸುತಿದ್ದೇನೆ. ನನ್ನ ಜನ್ಮವನ್ನು ಸಾರ್ಥಕಪಡಿಸಲಾರಿಯಾ?" ರಮಾನಂದನು, ಸರಸೆಯ ಬಳಿ ಸಾರುತ್ತ, ಎಂದನು.

ಮರುಕ್ಷಣದಲ್ಲಿ ಸರಸೆಯು ನಳಿದೋಳುಗಳು ರಮಾನಂದನ ಕೊರಳಿಗೆ ಸುತ್ತಿದುವು; ಅವಳ ಮೆಲ್ದುಟಿಗಳು ಅವನ ತುಟಿಗಳಿಗೆ ಒತ್ತಿದುವು. ಇವು ಅವನಿಗೆ ಸರಿಯಾದ ಉತ್ತರವನ್ನೇ ಕೊಡದೆ ಇದ್ದಿರಲಿಕ್ಕಿಲ್ಲ.



ಮೋಹಿನಿಯು ಆನಂದನ ಬಳಿಯಲ್ಲಿಯೆ ಪಾವಟಿಗೆಗಳ ಬದಿಯ
ಪೌಳಿಯನ್ನು ಆನಿಸಿಕೊಂಡು ನಿಂತು ಅವನ ಸಂಗೀತದಲ್ಲಿ
ತಲ್ಲೀನಳಾಗಿ ಹೋದಳು.

# ಪ್ರಣಯದಲ್ಲಿ ಪ್ರಳಯ

ಆನಂದನು ಬಾಯಲ್ಲಿ ಚಿನ್ನದ ಚಮಚವನ್ನು ಹಿಡಿದುಕೊಂಡೇ ಹುಟ್ಟಿದ್ದನು. ಅವನಿಗೆ ಈ ಪ್ರಪಂಚದಲ್ಲಿ ಯಾವುದರ ಕೊರತೆಯೂ ಇರಲಿಲ್ಲ. ತಾನು ಉಂಡುತಿಂದು ಹತ್ತುಹಲವರಿಗೆ ಬೇಕಾದಷ್ಟು ಹಂಚಿದರೂ ಕರಗದಂತಹ ಅಪಾರ ಆಸ್ತಿಗೆ ಅವನು ಒಬ್ಬನೇ ಅಧಿಕಾರಿಯಾಗಿದ್ದನು. ಅವನ ವಾಸಕ್ಕೆ ಅರಮನೆಯಂತಹ ವಿಶಾಲವೂ ಮನೋಹರವೂ ಆದ ಮನೆಯಿತ್ತು. ಅವನ ಮನಸ್ಸಿನ ಪ್ರತಿಯೊಂದು ಬಯಕೆಯನ್ನೂ ಎವೆಯಿಕ್ಕುವಷ್ಟರಲ್ಲಿ ಸಲ್ಲಿಸಲು ಹೆಜ್ಜೆಹೆಜ್ಜೆಗೂ ಆಳುಗಳು ಸೊಂಟಕಟ್ಟಿ ನಿಂತಿದ್ದರು. ಆದರೆ, ಏನಿದ್ದರೇನು? ಒಂದು ವಿಷಯದಲ್ಲಿ ಮಾತ್ರ ವಿಧಾತನು ಆನಂದನ ಮೇಲೆ ತೀರ ನಿಷ್ಠುರನಾಗಿದ್ದನು: ಆನಂದನು ಜನ್ಮಾಂಧನಾಗಿದ್ದನು; ಹುಟ್ಟಿದಂದಿನಿಂದ ಅವನು ಬೆಳಕನ್ನೇ ಕಂಡಿರಲಿಲ್ಲ.

ಆನಂದನು ತಮ್ಮ ಒಬ್ಬನೇ ಉತ್ತರಾಧಿಕಾರಿಯಾಗಿದ್ದುದರಿಂದ ಅವನ ತಂದೆತಾಯಿಗಳು ಅವನನ್ನು ಬಹಳ ಮಮತೆಯಿಂದ, ಬಹಳ ಜಾಗರೂಕತೆಯಿಂದ, ಸಾಕಿ ಸಲಹಿ ಬೆಳೆಸಿದರು. ಅವನಿಗೆ ಅಂಧ ವಿದ್ಯಾಪಾಠಕರ ಮೂಲಕ ಬಹಳ ಪ್ರಯತ್ನಪಟ್ಟು ವಿದ್ಯೆ ಕಲಿಸಿದರು. ಅವನಿಗೆ ಈ ಪ್ರಪಂಚದ ಜ್ಞಾನವನ್ನು ಗಳಿಸಲು ಎಲ್ಲ ವಿಧಾನಗಳಿಂದ ಅನುಕೂಲಿಸಿಕೊಟ್ಟರು. ಕಣ್ಣಿದ್ದುದಾದರೆ ಅವನು ಎಷ್ಟು ಪ್ರಯೋಜನ ಹೊಂದಬಹುದಾಗಿತ್ತೊ, ಸಾಧಾರಣ ಅಷ್ಟೇ ಮಟ್ಟಿಗೆ ಅವನಿಗೆ ಪ್ರತಿಯೊಂದು ವಿಷಯದಲ್ಲಿಯೂ ಪ್ರಯೋಜನ ದೊರಕಿಸಿಕೊಟ್ಟರು. ಇದಕ್ಕಾಗಿ ಅವರು ಖರ್ಚುಮಾಡಲು ಸ್ವಲ್ಪವೂ ಗಣ್ಯಮಾಡಲಿಲ್ಲ. ಕಾರಣ: ಅವನ ಮುಂದಿನ ಹಿತಕ್ಕೆ, ಮುಂದಿನ ಶ್ರೇಯಸ್ಸಿಗೆ, ಒದಗದ ಹಣವು ಮತ್ತೆ ಯಾವುದಕ್ಕೆ?

ತಮ್ಮ ಮಗನು ಈ ರೀತಿಯಾಗಿರುವುದಂತೂ ತಮ್ಮ ದುರದೃಷ್ಟ; ಆದರೆ ಅವನಿಗೆ ಒಂದು ಯೋಗ್ಯ ಹೆಣ್ಣನ್ನು ತಂದು, ಆತನು ಅವಳೊಂದಿಗೆ ಸಂಸಾರ ಮಾಡಿಕೊಂಡಿದ್ದುದನ್ನು ನೋಡಬೇಕೆಂಬುದು ಅವರ ಬಹುಕಾಲದ ಲವಲವಿಕೆಯಾಗಿತ್ತು. ಆನಂದನಿಗೆ ಊನವಿಲ್ಲದ ಮಕ್ಕಳು ಹುಟ್ಟುವುದನ್ನು ನೋಡಿ, ತಮ್ಮ ಕುಟುಂಬವು ಉದ್ಧಾರವಾಗುವುದಕ್ಕೆ ಯಾವ ಆತಂಕವೂ ಇಲ್ಲವೆಂಬ ತೃಪ್ತಿಯಿಂದ ಪ್ರಾಣ ಬಿಡಬೇಕೆಂದು ಅವರು ಮೊದಲಿನಿಂದಲೂ ಘಂಟಾಘೋಷವಾಗಿ ಹೇಳುತಿದ್ದರು.

ಅದಕ್ಕಾಗಿ ಅವರು ಆನಂದನಿಗೆ ಹದಿನಾರನೆಯ ವಯಸ್ಸಿನಲ್ಲಿಯೆ ಹನ್ನೆರಡು ವರ್ಷದ ಮೋಹಿನಿಯೊಡನೆ ಲಗ್ನ ಮಾಡಿದರು.

* * * *

ಮೋಹಿನಿಯು ರೂಪದಲ್ಲಿ ಮೋಹಿನಿಯೆ ಆಗಿದ್ದಳು. ಆದರೆ ಅದನ್ನು ನೋಡಿ ಹಿಗ್ಗುವುದು ಆನಂದನ ಅದೃಷ್ಟದಲ್ಲಿರಲಿಲ್ಲ. ಅವಳ ಹೃದಯವು ಮೋಹಕವಾಗಿದ್ದರೆ ಸಾಕೆಂದು ಆನಂದನು ಪರಮಾತ್ಮನಲ್ಲಿ ಬೇಡಿಕೊಂಡನು. ಆದರೆ **ಆತನ** ಇಚ್ಛೆಯನ್ನು ತಿಳಿಯಲು ಯಾರಿಗೆ ಸಾಧ್ಯ? ಅದನ್ನು ಮೀರಲು ಯಾರಿಗೆ ಅಳವು?

ರೂಪದಲ್ಲಿ ಮೋಹಿನಿಯಾಗಿದ್ದರೂ ಹೃದಯದಲ್ಲಿ ಮೋಹಿನಿಯಾಗುವಷ್ಟು ಪ್ರಾಯವು ಮೋಹಿನಿಗೆ ಆಗಿರಲಿಲ್ಲ. ಆಗಲೇ ಅವಳಿಗೆ ಮದುವೆಯಾದುದು.

ಮದುವೆಯಾಗುವ ಮುಂಚೆ ಪ್ರತಿಯೊಬ್ಬ ಯುವಕನೂ ಕನಸು ಕಾಣುವನು,—ತಾನು ರಂಭೆಯಂತಹ ಸುಂದರಿಯನ್ನೇ ವರಿಸುವೆನು; ಸಾವಿರಗಟ್ಟಳೆ ರೂಪಾಯಿ ವರದಕ್ಷಿಣೆ ಪಡೆಯುವೆನು; ಅವಳು ಓದುಬರಹ ಹೆಚ್ಚು ಕಲಿತಿಲ್ಲವಾದರೆ ಅವಳನ್ನು ಬಿ. ಎ., ಯಾ ಎಮ್. ಎ., ವರೆಗೆ ಓದಿಸುವೆನು; ಅವಳನ್ನು ಸಿಂಹಾಸನದಲ್ಲಿ ಕುಳ್ಳಿರಿಸಿ ಮೆರೆಯಿಸುವೆನು, ಇಲ್ಲವೆ ಪೀಠದಲ್ಲಿ ಇರಿಸಿ ಪೂಜಿಸು

ವೆನು;—ಎಂದು ಮುಂತಾಗಿ. ಹಾಗೆಯೆ ಯುವತಿಯರಲ್ಲಿ ಪ್ರತಿಯೊಬ್ಬಳೂ ಆಕಾಶಕ್ಕೆ ಏಣಿ ಕಟ್ಟುವಳು,—ತಾನು ಮೋಹನಾಕಾರನಾದ ಗಂಡನನ್ನೇ ಪಡೆಯುವೆನು; ಅವನಿಗೆ ಕಣ್ಮಣಿಯಾಗಿ ಮೆರೆಯುವೆನು; ಅವನ ಹೃದಯವನ್ನು ಆಕ್ರಮಿಸಿ ಅವನನ್ನು ಆಳುವೆನು;—ಎಂದು ಮೊದಲಾಗಿ. ಆದರೆ ಮದುವೆಯ ಮಂಟಪದಲ್ಲಿ ಅಂತಃಪಟವನ್ನು ಮೇಲೆತ್ತಿದಾಗ ಇವರೊಳಗೆ ಎಷ್ಟು ಮಂದಿ ಯುವಕರ ಸ್ವಪ್ನಗಳು ನಿಜರೂಪ ಹೊಂದುವುವು?—ಎಷ್ಟು ಮಂದಿ ಯುವತಿಯರು ತಮ್ಮ ಇಚ್ಛಿತ ಸ್ವರ್ಗವನ್ನು ಅಡರುವರು?

ಮೋಹಿನಿಯಾದರೂ ತನ್ನನ್ನು ವರಿಸುವ ತರುಣನ ಕುರಿತು ಆಕಾಶಕ್ಕೆ ಏಣಿಯನ್ನು ಕಟ್ಟದಿರಲಿಲ್ಲ. ಆ ಏಣಿಯು ತನ್ನನ್ನು ಸ್ವರ್ಗಕ್ಕೇ ಅಲ್ಲದಿದ್ದರೂ, ಒಂದು ಉನ್ನತಸ್ಥಾನಕ್ಕಾದರೂ ಒಯ್ಯದೆ ಇರಲಿಕ್ಕಿಲ್ಲವೆಂದು ಅವಳ ನಂಬಿಕೆಯಾಗಿತ್ತು. ಆದರೆ ಆ ಏಣಿಯೆ ಮುರಿದು ತಾನು ಪಾತಾಳಕ್ಕೆ—ಅಡಿಯನ್ನೇ ಅರಿಯದ ಆಳಕ್ಕೆ—ಬಿದ್ದೇನೆಂದು ಅವಳು ಕನಸಿನಲ್ಲಿಯೂ ಕಲ್ಪಿಸಿರಲಿಲ್ಲ. ಹಾಗಾಗಿ, ತಾನು ಮಾಲೆ ಹಾಕಿದವನು ಬೆಳಕೇ ಕಾಣದ ಹುಟ್ಟುಕುರುಡನೆಂದು ತಿಳಿದುಬರುತ್ತಲೇ ಅವಳಿಗಾದ ದುಃಖವೂ ಉತ್ಸಾಹಭಂಗವೂ ನಿಸ್ಸಹಾಯಭಾವನೆಯೂ ಯಾರ ಊಹನೆಗೂ ನಿಲುಕವು. ಮದುವೆಯ ಉತ್ಸವದಲ್ಲಿ ಸಾಮಾನ್ಯವಾಗಿ ಎಲ್ಲರಿಗೂ ಉಂಟಾಗುವ ಸಂತೋಷದ, ಉತ್ಸಾಹದ, ಬದಲಿಗೆ ಮೋಹಿನಿಗೆ ಫಾಸೀಕಂಬದ ಬಳಿ ನಿಂತ ಕೈದಿಯ — ಅದರಲ್ಲಿಯೂ ನಿರಪರಾಧಿ ಕೈದಿಯ — ಮನಸ್ಸಿನ ಮೇಲಾಗುವ ವಿಹ್ವಲತೆಯ ಪರಿಣಾಮದ ಅನುಭವವಾಯಿತು.

೨

ಆನಂದನು, ಮದುವೆಯಾಗುತ್ತಲೇ, ಇನ್ನು ಮುಂದೆ ತನಗೆ ಮೋಹಿನಿಯು ಕಣ್ಣಿಗೆ ಕಣ್ಣಾಗಿಯೂ, ಗೆಳೆತನಕ್ಕೆ ಗೆಳತಿಯಾಗಿಯೂ, ಆತ್ಮಕ್ಕೆ

ಒಂದು ಸ್ವಂತ ಆತ್ಮವಾಗಿಯೂ ನೆರವಾಗುವಳೆಂದು ಆಶಿಸಿದನು. ಆದರೆ ಅವನ ಈ ಆಸೆಯು ಬರೀ ಬಯಲುದೊರೆಯೆಂದು ಅವನಿಗೆ ತಿಳಿದುಬರಲು ಹೆಚ್ಚು ಸಮಯ ಬೇಕಾಗಲಿಲ್ಲ.

* * * *

ಆನಂದನು ತನ್ನ ಕೋಣೆಯಲ್ಲಿ ಸುಖಾಸನದ ಮೇಲೆ ಒರಗಿ ಗಾಳಿಗೋಪುರಗಳನ್ನು ಕಟ್ಟುವುದರಲ್ಲಿ ಮಗ್ನನಾಗಿದ್ದನು. ಆಗ ಕೋಣೆಯೊಳಗೆ ಬೇರೆ ಯಾರೋ ಬಂದುದು ಅವನ ಚುರುಕಾದ ಕಿವಿಗಳಿಗೂ ಸೂಕ್ಷ್ಮವಾದ ಜ್ಞಾನದೃಷ್ಟಿಗೂ ಗೋಚರವಾಯಿತು.

ಆಗಿಂದಾಗ ಕೈಬಳೆಗಳಿಂದ ಆಗುತ್ತಿದ್ದ ಕಿಣಿಕಿಣಿ-ಶಬ್ದದಿಂದಲೂ, ಘಮ್ಮನೆ ಪರಿಮಳಿಸುತ್ತಿದ್ದ ಹೂಗಂಪಿನಿಂದಲೂ ಒಳಗೆ ಬಂದ ವ್ಯಕ್ತಿಯು ತನ್ನ ಅಧಿಷ್ಠಾತ್ರಿಯಾದ ಮೋಹಿನಿಯೆ ಎಂದು ಅವನಿಗೆ ಖಚಿತವಾಯಿತು.

ಆನಂದನು ಮೋಹಿನಿಯೊಡನೆ ಸರಸಸಲ್ಲಾಪವಾಡಬೇಕೆಂದು ಬಲುವಾಗಿ ಬಯಸಿದನು. ಆದರೆ ಯಾವ ರೀತಿಯಿಂದ ಮೊದಲು-ಮಾಡಲಿ?—ಎಂದು ಯೋಚಿಸಲಾರದೆಹೋದನು. ಇನ್ನೂ ಯೋಚಿಸುತ್ತಿರುವಂತೆಯೆ ಅವನ ಚುರುಕಾದ ಕಿವಿಗಳಿಗೆ ಅಕಸ್ಮಾತ್ತಾಗಿ ನಿಟ್ಟುಸಿರುಗಳ ಅನುಭವವಾಯಿತು.

ಆನಂದನು ಕಾತರನಾಗಿ ಕರೆದನು: "ಮೋಹಿನಿ!"

ಮಾರುತ್ತರ ಬರಲಿಲ್ಲ.

ಆನಂದನು ತಿರುಗಿ ಕರೆದು ಕೇಳಿದನು: "ಮೋಹಿನಿ! ಅದೇಕೆ ನಿಟ್ಟುಸಿರು?"

ಪುನಃ ನೀರವ.

ಆನಂದನು, ಮೋಹಿನಿಯು ಬಳೆಗಳ ಶಬ್ದದಿಂದ ಅವಳು ಬಳಿಯ ಕಿಟಿಕಿಯ ಹತ್ತಿರ ನಿಂತಿದ್ದಳೆಂದು ತಿಳಿದುಕೊಂಡು, ಮೆಲ್ಲಗೆ ಆ ಕಡೆ ಹೋದನು.

ಮೋಹಿನಿಯು ಆನಂದನನ್ನೇ ಏಕಾಗ್ರದೃಷ್ಟಿಯಿಂದ ನೋಡುತ್ತ ನಿಂತಳು.

ಆನಂದನ ದೃಷ್ಟಿಯಿಲ್ಲದ ಕಣ್ಣುಗಳನ್ನೇ ದಿಟ್ಟಿಸುತ್ತಿರಲು, ಅವಳಿಗೆ ಆತನಲ್ಲಿ ಒಂದು ತರದ ಸಹಾನುಭೂತಿಯುಂಟಾಯಿತು. ಅವನು ಅವಳ ಹತ್ತಿರ-ಹತ್ತಿರಕ್ಕೆ ಬರುತ್ತಲೇ ಅವಳು, ನಾಗಸ್ವರದ ಮಾಯೆಗೆ ಒಳಪಟ್ಟ ಹಾವಿನಂತೆ, ಅವನನ್ನೇ ದಿಟ್ಟಿಸುತ್ತ ಕದಲದೆ ಇದ್ದುಬಿಟ್ಟಳು. ಆದರೆ ಅವನು ತೀರ ಹತ್ತಿರಕ್ಕೆ ಬಂದು, ಕೈಯನ್ನು ಮೆಲ್ಲಗೆ ಆಡಿಸಿ, ಅವಳ ಕೈಯನ್ನು ಹಿಡಿದುಕೊಳ್ಳುವಷ್ಟರಲ್ಲಿ, ಅವಳಿಗೆ ಏನೋ ಒಂದು ವಿಧದ ಭೀತಿಭಾವವು ತಲೆದೋರಿ, ಅವಳು ತಪ್ಪಿಸಿಕೊಂಡು ಆಚೆಗೆ ಸರಿದು ನಿಂತಳು. ಅವಳು ಗಟ್ಟಿಯಾಗಿ ಬಿಕ್ಕಲಾರಂಭಿಸಿದಳು.

ಆನಂದನು ಅಪ್ರತಿಭನಾದನು. ಅವನಿಗೆ ಆಗತಾನೆ ಮೋಹಿನಿಯ ಮನಸ್ಸಿನ ಪರಿಸ್ಥಿತಿಯ ವಿಷಯದಲ್ಲಿ ಸಂಶಯವುಂಟಾಯಿತು.

ಅವನು ಬಹಳ ಮೃದು ಸ್ವರದಿಂದ ಕೇಳಿದನು: "ಮೋಹಿನಿ! ನನ್ನ ಕುರುಡುತನವು ನಿನ್ನನ್ನು ಕಾಡುತ್ತಿರುವುದೇ?"

ಮೋಹಿನಿಯ ಬಿಕ್ಕಳಿಕೆ ಮತ್ತೂ ಹೆಚ್ಚಾಯಿತು.

ಆನಂದನು ವಿಹ್ವಲನಾಗಿ ವಿಚಾರಿಸಿದನು: "ಮೋಹಿನಿ! ನೀನೇಕೆ ಹೀಗೆ ಹಲುಬುತ್ತಿರುವಿ? ನನ್ನ ಕಣ್ಣುಗಳು ಕುರುಡಾಗಿರುವ ಮಾತ್ರಕ್ಕೆ ನಾನು ಪೂರಾ ನಿಷ್ಪ್ರಯೋಜಕನೆಂದು ಎಣಿಸುವಿಯಾ? ಕುರುಡನಾಗಿದ್ದರೇನು, ನಿನ್ನ ಬಯಕೆಗಳನ್ನೆಲ್ಲ, ಸ್ವಲ್ಪವೂ ಊನಬಾರದಂತೆ, ಸಲ್ಲಿಸಲಾರದೆಹೋದೇನೆಂದು ಅಂಜಿರುವಿಯಾ?"

ಆನಂದನು ಅವಳ ಕಡೆಗೆ ಹೋಗಿ ಅವಳ ಕೈಯನ್ನು ಹಿಡಿದುಕೊಂಡನು.

ಮೋಹಿನಿಯು ತನ್ನ ಕೈಯನ್ನು ಬಿಡಿಸಿಕೊಳ್ಳಲು ನೋಡಿದಳು; ಅದು ಸಾಧ್ಯವಾಗದೆಹೋಯಿತು.

ಅವಳು ಅಳುದನಿಯಿಂದ ಎಂದಳು: "ಬಿಡಿ, ನೋವಾಗುತ್ತದೆ!"

ಆನಂದನು ಹತಾಶನಾಗಿ ಕೇಳಿದನು: "ಆದರೆ, ನಿನ್ನ ಈ ರೀತಿಯಿಂದ ನನ್ನ ಮನಸ್ಸಿಗೆ ಎಷ್ಟು ನೋವಾಗುತ್ತದೆ, ಬಲ್ಲಿಯಾ? ಇಗೋ, ನಿನ್ನ ಕೈಯನ್ನು ಬಿಟ್ಟೆನು; ಆದರೆ ನೀನೂ, ಮೊದಲೇ ಅಸಹಾಯನಾದ ನನ್ನ ಕೈಯನ್ನೂ ಬಿಡುವಿಯಾ?"

ಕೇಳುತ್ತ ಅವಳ ಕೈಯನ್ನು ಬಿಟ್ಟು ನಿಂತನು.

ಮೋಹಿನಿಯು ನಿರುತ್ತರಳಾಗಿ ನಿಂತಳು.

ಆನಂದನು ಪರವಶತೆಯಿಂದ ವಿಶದಪಡಿಸಿದನು: "ಮೋಹಿನಿ! ಪರಮಾತ್ಮನು ನನ್ನನ್ನು ದೃಷ್ಟಿಯ ಸುಖದಿಂದ ವಂಚಿಸಿದನು. ಯಾವಾಗ ಬೆಳಗಾಯಿತು, ಯಾವಾಗ ಕತ್ತಲಾಯಿತು ಎಂಬುದನ್ನೂ, ಯಾವುದು ಆಹಾರ, ಯಾವುದು ಆಹಾರವಲ್ಲ ಎಂಬುದನ್ನೂ,—ಹೆಚ್ಚೇಕೆ?—ಯಾವುದು ನೀರು, ಯಾವುದು ನೀರಲ್ಲ ಎಂಬುದನ್ನೂ ನಾನು ಬೇರೆಯವರಿಂದಲೇ ತಿಳಿದುಕೊಳ್ಳಬೇಕಾಗಿದೆ. ಹೆಚ್ಚೇಕೆ, ನಾನು ಜೀವವನ್ನು ಧರಿಸಿಕೊಂಡಿರುವುದೇ ಇತರರ ಸಹಾಯದಿಂದ. ಆದರೆ, ನನಗಿರುವ ಅಪಾರ ಆಸ್ತಿಯಿಂದಾಗಿ, ನಾನು ಅದಾವುದಕ್ಕೂ ಹೆದರಬೇಕಾಗಿಲ್ಲ. ಆದರೆ, ಬರೀ ಉಂಡುತಿಂದು ಹಾಯಾಗಿ ಇದ್ದುಬಿಟ್ಟುದರಿಂದಲೇ ಜೀವಿತದ ಸಾರ್ಥಕತೆಯಾಗದು. ಅದನ್ನು ಮೃಗಪಕ್ಷಿಗಳೂ ಮಾಡಬಲ್ಲುವು. ಆದರೆ ನಾವು ಮಾನವಜಾತಿಯವರು; ನಮ್ಮ ಆತ್ಮಕ್ಕೆ ತೃಪ್ತಿಯಾಗಬೇಕಾದರೆ, ನಮ್ಮ ಜೀವನವು ನಿಜವಾಗಿಯೂ ಸಫಲವಾಗಬೇಕಾದರೆ, ಈ ಆತ್ಮಕ್ಕೆ ತೀರ ಆತ್ಮೀಯವಾದ ಇನ್ನೊಂದು ಆತ್ಮದ ಸಹಕಾರ ಬೇಕು!—ಇದಕ್ಕಾಗಿಯೆ ನಾನು ನಿನ್ನನ್ನು ಕೋರಿದೆ."

ಆನಂದನು ಸ್ವಲ್ಪ ಸಮಯದ ವರೆಗೆ ಸುಮ್ಮನಾದನು; ಬಳಿಕ ಆರ್ತಸ್ವರದಲ್ಲಿ ಅಂಗಲಾಚಿದನು: "ನೀನು ನನ್ನ ಜನ್ಮವನ್ನು ಸಾರ್ಥಕ ಮಾಡಲಾರಿಯಾ?"

ಅವನ ಸ್ವರದಲ್ಲಿ ಅವರ್ಣನೀಯವಾದ ಒಂದು ಮನೋಭಾವವು ತೇಲಿಬರುತಿತ್ತು. ಮೋಹಿನಿಯ ಅಸಂಸ್ಕೃತವಾದ ಹೃದಯಕ್ಕೆ ಮಾತ್ರ ಅದರ ಅನುಭವವಾಗಲಿಲ್ಲ. ಅವಳ ಅನನುಭವಸ್ಥವಾದ ಮನಸ್ಸಿಗೆ ಆನಂದನ ಮಾತುಗಳ ಅರ್ಥವು ನಾಟಲಿಲ್ಲ. ಅವಳು ಇನ್ನೂ ಮೌನವಾಗಿಯೆ ಇದ್ದಳು.

ಆನಂದನು ಭಗ್ನಮನೋರಥನಾಗಿ ಶೋಕಾಕುಲನಾದನು. ಅವಳು ತನ್ನನ್ನು ಪ್ರೀತಿಸುವುದಿಲ್ಲವೆಂದೇ ಅವನು ತಿಳಿದುಕೊಂಡನು. ಇನ್ನು ತಾನಾದರೂ ಅವಳನ್ನು ಯಾಕೆ ಕಾಡಬೇಕು?—ಎಂದು ಅವನಿಗೆ ತೋಚಿತು.

ಆನಂದನು ಗಂಭೀರವಾಗಿ ವ್ಯಕ್ತಪಡಿಸಿದನು: "ಮೋಹಿನಿ! ನೀನಾದರೂ ನನ್ನ ಜೀವನದ ಕತ್ತಲೆಯನ್ನು ಹರಿಯಿಸಿ, ಬೆಳಕು ಕಾಣಿಸುವಿಯೆಂದು ನಂಬಿದ್ದೆ; ಇನ್ನು ಅದಕ್ಕೂ ಎಡೆಯಿಲ್ಲವೆಂದು ಕಂಡೆನು. ನನ್ನ ಜೀವನವಂತೂ ನಿಷ್ಫಲವೇ ಸೈ; ಆದರೆ, ಅದರೊಂದಿಗೆ ನಿನ್ನ ಜೀವನವನ್ನೂ ಹುಡಿಗೂಡಿಸಲು ನನಗೆ ಮನಸ್ಸಿಲ್ಲ. ನಾನು ನಿನ್ನನ್ನು ವರಿಸುವುದರಿಂದ ಒಂದು ತಪ್ಪನ್ನು ಮಾಡಿದೆನು; ಇನ್ನು ನಿನ್ನನ್ನು ನಿನ್ನ ಅಪೇಕ್ಷೆಗೆ ಎದುರಾಗಿ ಆಳುವ ಇನ್ನೊಂದು ಅಪರಾಧವನ್ನು ಮಾಡುವುದಕ್ಕೆ ನನ್ನ ಮನಸ್ಸು ಹೇಸುವುದು. ಇಗೋ, ಇಂದಿನಿಂದ ನೀನು ಸ್ವತಂತ್ರೆ; ನಾನು ನಿನ್ನನ್ನು ಯಾವ ವಿಷಯದಲ್ಲಿಯೂ ಆತಂಕಪಡಿಸೆನು. ನನ್ನ ದುಃಖವೇ ನನಗೆ ಸಾಕು; ಅದನ್ನು ಶಮನಗೊಳಿಸುವ ನೆವದಿಂದ ನಿನ್ನನ್ನೂ ದುಃಖಕ್ಕೆ ಈಡು ಮಾಡಲಾರೆನು."

ಆನಂದನ ಮನಸ್ಸಿನ ಉದ್ವೇಗವು ಅತಿರೇಕವಾಗಲು, ಅವನು ಆ ಕೋಣೆಯಲ್ಲಿ ಇರಲಾರದೆ ಮೆಲ್ಲಮೆಲ್ಲಗೆ ಹೊರಗೆ ಉದ್ಯಾನದೆಡೆಗೆ ಹೋಗಿಬಿಟ್ಟನು.

* * * *

ಮೋಹಿನಿಯ ತವರೂರು ಮಂಗಳೂರು. ಅವಳು ಅಲ್ಲಿ ವಿದ್ಯಾಭ್ಯಾಸ ಮಾಡುತ್ತಿದ್ದಾಗಲೇ ಸೆಕೆಗಾಲದ ರಜೆಯಲ್ಲಿಯೆ ಅವಳ ಮದುವೆಯಾದುದು. ರಜೆಯ ಸಮಯದಲ್ಲಿಯೆ ಅವಳು ಗಂಡ ನಲ್ಲಿ ಬಂದು ಉಳಿದುಕೊಂಡಿದ್ದಳು. ಆನಂದನ ಮಾತುಗಳಿಂದ ಅವಳ ಮನಸ್ಸಿನ ಮೇಲೆ ಹೆಚ್ಚಿನದೇನೂ ಪರಿಣಾಮವಾಗದಿದ್ದರೂ ತನ್ನ ವಿದ್ಯಾಭ್ಯಾಸವನ್ನು ಮುಂದೊತ್ತಬೇಕೆಂದು ಅವಳು ಅಂದೇ ನಿರ್ಧಾರಮಾಡಿದಳು.

ಆನಂದನ ತಂದೆತಾಯಿಗಳು ಇದಕ್ಕೆ ತೀರ ವಿರೋಧವಾಗಿ ಇದ್ದರೂ ಆನಂದನು ಅವಳಿಗೆ ಅನುಕೂಲನಾದನು. ಪರಿಣಾಮ: ಮೋಹಿನಿಯು, ಶಾಲೆ ಆರಂಭವಾಗುತ್ತಲೇ, ತಿರುಗಿ ಮಂಗಳೂರಿಗೆ ಹೋದಳು.

೩

ಆನಂದನು ತನ್ನ ದಿನಚರಿಯನ್ನು ಪೂರ್ತಿಯಾಗಿ ಬದಲಾಯಿಸಿ ದನು. ಒಬ್ಬ ಪ್ರಖ್ಯಾತ ವೀಣಾಗಾಯಕನನ್ನು ಕರೆಯಿಸಿ ಆತನು ವೀಣಾವಾದನವನ್ನು ಅಭ್ಯಾಸ ಮಾಡತೊಡಗಿದನು. ತನ್ನ ಬಾಲ್ಯದ ಮಿತ್ರನಾದ ಮನೋಹರನನ್ನು ಅವನು ತನ್ನಲ್ಲಿಯೆ ಸಂಗಾತಿಯಾಗಿ ನಿಲ್ಲಿಸಿಕೊಂಡನು. ಮನೋಹರನೂ ತಕ್ಕಮಟ್ಟಿಗೆ ಓದುಬರಹ ಬಲ್ಲ ವನು; ಹಲವು ಭಾಷೆಗಳ ಪರಿಚಯವಿದ್ದವನು; ಆನಂದನಂತೆಯೆ ಗಾಯನದಲ್ಲಿಯೂ ಅಭಿರುಚಿಯುಳ್ಳವನು. ಮನೋಹರನ ಸಂಗ ದಿಂದಲೂ, ಗಾಯನದ ವ್ಯಾಸಂಗದಿಂದಲೂ ಆನಂದನು ತನ್ನ ಮನ ಸ್ಸಿನ ಹಂಬಲನ್ನು ಆದಷ್ಟು ಮಟ್ಟಿಗೆ ಮರೆಯಲು ಯತ್ನಿಸಿದನು.

ಆನಂದನ ಮನೆಯ ಸುತ್ತಲೂ ವಿಶಾಲವಾದ ಉದ್ಯಾನವಿತ್ತು. ಉದ್ಯಾನದಲ್ಲಿ ನಡುನಡುವೆ ಲತಾಮಂಟಪಗಳೂ ಆರಾಮಾಸನ ಗಳೂ ಇದ್ದವು. ಒಂದು ಕಡೆಯಲ್ಲಿ ನೇತ್ರಾವತಿಯು ಉದ್ಯಾನದ

ಗಡಿಯಾಗಿ ಮಂದಗಮನದಿಂದ ಹರಿಯುತಿದ್ದಳು. ಉದ್ಯಾನದಿಂದ ಹೊಳೆಗೆ ಇಳಿಯಲು ಒಂದೆಡೆ ಸುಂದರವಾದ ಪಾವಟಿಗೆಗಳನ್ನು ಕಟ್ಟಿಸಿದ್ದರು.

ಆನಂದನು ಪ್ರತಿದಿನವೂ ಹೆಚ್ಚಿನ ಸಮಯವನ್ನು ಮನೋಹರನೊಂದಿಗೆ ಉದ್ಯಾನದಲ್ಲಿಯೆ ಕಳೆಯುವನು. ಉದ್ಯಾನದೊಳಗಿನ ಪ್ರತಿಯೊಂದು ಗಿಡವನ್ನೂ ಪ್ರತಿಯೊಂದು ಬಳ್ಳಿಯನ್ನೂ ಅವನು ಬಲ್ಲವನಾಗಿದ್ದನು. ತನ್ನ ಗ್ರಹಣಶಕ್ತಿಯ ಬಲದಿಂದ ಅವನು ಪ್ರತಿಯೊಂದು ಪಾತಿ, ಕಟ್ಟೆ, ಲತಾಮಂಟಪ ಮುಂತಾದುದರ ಸರಿಯಾದ ಸ್ಥಾನವನ್ನು ತಿಳಿದುಕೊಂಡು, ಯಾರ ಸಹಾಯವೂ ಇಲ್ಲದಾಗಲೂ ಸಹ, ಉದ್ಯಾನವನ್ನು ನಿರಾತಂಕವಾಗಿ ಸುತ್ತಬಲ್ಲವನಾಗಿದ್ದನು.

ಆನಂದನು ತನ್ನ ಅತುಲಪ್ರೇಮವನ್ನು ತನ್ನ ಉದ್ಯಾನದ ಗಿಡಬಳ್ಳಿಗಳಿಗೆ ಹಂಚಿಕೊಟ್ಟಿದ್ದನು. ಅವುಗಳು ಕಾಲಕಾಲಕ್ಕೆ ಬಿಡುತಿದ್ದ ಹೂಗಳ ಮೇಲಂತೂ ಆನಂದನ ಪ್ರೇಮವು ಅವರ್ಣನೀಯ. ಅವನು ತನ್ನ ಉದ್ಯಾನದೊಳಗಿನ ಪ್ರತಿಯೊಂದು ಗಿಡವನ್ನೂ ಬಳ್ಳಿಯನ್ನೂ ಒಂದೊಂದು ಹೆಸರಿನಿಂದ ಕರೆಯುತಿದ್ದನು. ಅವೆಲ್ಲವೂ ತನ್ನ ಮಕ್ಕಳೆಂದೂ, ಇಡೀ ಉದ್ಯಾನವೇ ತನ್ನ ಸಂಸಾರವೆಂದೂ ಆನಂದನ ಊಹೆಯಾಗಿತ್ತು.

ಆನಂದನು, ತನ್ನ ಉದ್ಯಾನದಲ್ಲಿ ಅರಳುವ ಹೂಗಳನ್ನೆಲ್ಲ ಆಯಾ ಗಿಡಬಳ್ಳಿಗಳ ಮೇಲೆಯೆ ಇರಗೊಡಿಸಿ, ಅವುಗಳನ್ನು ಬಲುವಾಗಿ ಮುದ್ದಿಸುತಿದ್ದನು. ಪ್ರತಿದಿನ ಮುಂಜಾನೆ ಅರಳಿದ ಹೂಗಳ ಪರಿಮಳವನ್ನು ಮೂಸಿ, ಅವುಗಳ ಮೇಲೆ ಬೆರಳಾಡಿಸಿ, ಆನಂದನು ಅವುಗಳ ಸೌಂದರ್ಯವನ್ನು ಕಲ್ಪಿಸಿಕೊಳ್ಳುವನು, ಮತ್ತು ಅತ್ಯಂತ ಸಂತೋಷವನ್ನು ಅನುಭವಿಸುವನು; ಸಾಯಂಕಾಲದಲ್ಲಿ ಅವು ಬಾಡಿ, ಮುದುಡಿ, ಬಿದ್ದುಹೋಗಲು, ಆನಂದನ ಹೃದಯವೂ ಅವು

ಗಳಂತೆಯೆ ಬಾಡಿ ದುಃಖಪೂರ್ಣವಾಗುವುದು; ಅವನ ಮನಸ್ಸು ವೈರಾಗ್ಯವನ್ನು ಹೊಂದುವುದು.

* * * *

ಆನಂದನು ತನ್ನ ವೀಣೆಯನ್ನು ಕೈಯಲ್ಲಿ ತೆಗೆದುಕೊಂಡು, ಯಾವುದಾದರೊಂದು ಗಿಡದ ಕಟ್ಟೆಯ ಮೇಲಾಗಲಿ, ಲತಾಮಂಟಪದಲ್ಲಾಗಲಿ, ಹೊಳೆಗೆ ಇಳಿಯುವ ಸೋಪಾನಗಳ ಮೇಲಾಗಲಿ ಕುಳಿತು, ಸುಮಧುರವಾದ ಕಂಠದೊಡನೆ ವೀಣೆಯ ನಾದವನ್ನು ಸೇರಿಸುತ್ತ ಹಾಡುವನು:

"ಅಮಿತ ದಯಮ್
ತವ ಹೃದಯಮ್
ಮಸೃಣ ಸುಧಾ-
ರಸ ಸರಣಮ್?
ಪರುಷೇರಂ-
ಮದ ಸರಣಮ್?
ತೃಷಿತಾನಾಮ್
ತನಯಾನಾಮ್
ಪರುಷೇರಂ-
ಮದ ಸರಣಮ್?—

"ತವ ಹಿ ಕರೋ—
ಮೃದುಲತರೋ—
ನವ ನವ ಮಧು-
ಕಣ ದಾಯಿೊ?
ಭೀಕರ ವಿಷ-
ಲವ ದಾಯಿೊ?
ಕ್ಷುಧಿತಾನಾಮ್
ತನಯಾನಾಮ್
ಭೀಕರ ವಿಷ-
ಲವ ದಾಯಿೊ?—"

ವೀಣೆಯು ಆನಂದನ ರಾಗಾಲಾಪನವನ್ನು ಲಹರಿ-ಲಹರಿಯಾಗಿ ಪ್ರತಿಧ್ವನಿಸುವುದು. ಒಂದೆರಡು ಘಂಟೆಗಳ ವರೆಗೆ ಆನಂದನು ಗಾಯನದಲ್ಲಿಯೇ ತನ್ಮಯನಾಗಿ ಕುಳಿತುಬಿಡುವನು.

* * * *

ಆನಂದನು ಉದ್ಯಾನಸಂಚಾರದಲ್ಲಿಯೂ ಗಾಯನದಲ್ಲಿಯೂ ಉದ್ಯುಕ್ತನಾಗಿರದ ಸಮಯದಲ್ಲಿ ಮನೋಹರನು ಅವನಿಗೆ ನಾನಾ ಪುಸ್ತಕಗಳನ್ನು ಓದಿಹೇಳುವನು. ಅನೇಕ ತರದ ಒಗಟು ಮುಂತಾದ ಮೆದುಳಿನ ಆಟಗಳಿಂದ ಆನಂದನ ಮನಸ್ಸನ್ನು ಉಲ್ಲಾಸಗೊಳಿಸುವನು. ಆತ್ಮೀಯವಾದ ಮಾತುಕತೆಗಳಿಂದ ಅವನ ಮನಸ್ಸನ್ನು ಯಾವಾಗಲೂ ಹಗುರವಾಗಿರಿಸಲು ಕೈಲಾದಷ್ಟು ಯತ್ನಿಸುವನು. ಹೆಚ್ಚೇಕೆ, ತನ್ನ ಜೀವನದಲ್ಲಿ ಮೋಹಿನಿಯು ಯಾವ ಸ್ಥಾನವನ್ನು ಆಕ್ರಮಿಸಬೇಕೆಂದು ಆನಂದನು ಬಯಸಿದ್ದನೋ ಆ ಸ್ಥಾನವನ್ನು ಮನೋಹರನು ಆಕ್ರಮಿಸಿದ್ದನು. ಮನೋಹರನ ಬದಲಿಗೆ ಮೋಹಿನಿಯೆ ಇರುತ್ತಿದ್ದರೆ! ಹಾ! ಆನಂದನ ಮನಸ್ಸು ಈ ಯೋಚನೆಯಿಂದ ಶಾಂತಿಯೆಂದರೇನೆಂಬುದನ್ನು ಕಾಣಲಾರದೆಹೋಯಿತು.

೪

ಮೋಹಿನಿಯು ಒಂದೇ ಪ್ರಕಾರ ವಿದ್ಯಾಭ್ಯಾಸ ಮಾಡುತ್ತ ಹೋದಳು. ಬಿ. ಎ. ಉತ್ತೀರ್ಣಳಾಗುತ್ತಲೇ ಅವಳಿಗೆ ಇನ್ನು ಮುಂದೆ ಏನು ಮಾಡುವುದೆಂದು ತೋಚದೆಹೋಯಿತು. ವಿದ್ಯಾರ್ಜನೆಯ ಮುಂದೆ ಅವಳಿಗೆ ಮತ್ತೆ ಏತರ ಯೋಚನೆಯೂ ಉಂಟಾಗಿರಲಿಲ್ಲ. ಅವಳ ಖರ್ಚಿಗೆ ಬೇಕಾದಷ್ಟು ಹಣವನ್ನು ಆನಂದನು ಆಗಿಂದಾಗ ಕಳುಹಿಸುತ್ತಿದ್ದನು. ಅವನು ತನ್ನ ಜೀವನವನ್ನು ಹುಡಿಗೂಡಿಸಿದವನೆಂಬ ಭಾವನೆಯು ಅವಳಲ್ಲಿ ಬಲು ಚೆನ್ನಾಗಿ ಬೇರೂರಿಕೊಂಡಿತ್ತು. ಏನು ಮಾಡಿದರೂ ಅದನ್ನು ಕಿತ್ತೆಸೆಯಲು ಅವಳಿಂದ

ಕೈಗೂಡದೆ ಹೋಯಿತು. ಆದುದರಿಂದ, ಆನಂದನ ಮೇಲಿನ ಸೇಡು ತೀರಿಸಲು ಎಂಬಂತೆ, ಅವಳು ಈವರೆಗೆ ಆತನಿದ್ದಲ್ಲಿಗೆ ಹೋಗಿಯೆ ಇದ್ದಿಲ್ಲ.

ಇಷ್ಟರಲ್ಲಿಯೆ ಅವಳ ಅತ್ತೆಯೂ ಮಾವನೂ ನಿರಾಶೆಯಿಂದ ಬೆಂದು ಬೆಂಡಾಗಿ, ಒಬ್ಬರ ಹಿಂದೆ ಒಬ್ಬರು, ಈ ಲೋಕದಿಂದ ಪಾರಾಗಿದ್ದರೆಂಬುದೂ ಅವಳ ಕಿವಿಯ ಮೇಲಿಂದ ಹೋಗಿತ್ತು. ಅದನ್ನು ಅವಳು ಒಂದು ಕಿವಿಯಿಂದ ಕೇಳಿ, ಇನ್ನೊಂದು ಕಿವಿಯಿಂದ ಬಿಟ್ಟಿದ್ದಳು. ಅವರು ತನಗೆ, ತಿಳಿದೂ ತಿಳಿದೂ, ಮೋಸಮಾಡಿರಲಿಲ್ಲವೇ? ತನ್ನ ಇಡೀ ಭವಿಷ್ಯವನ್ನೇ ನಾಶಮಾಡಿರಲಿಲ್ಲವೇ? ಅಂತಹವರಿಗಾಗಿ ಒಂದು ಕಂಬನಿಯನ್ನಾದರೂ ಉದುರಿಸಲು ಅವಳ ಮನಸ್ಸು ಒಡಂಬಡಲಿಲ್ಲ.

ಈಗ, ಇನ್ನು ತನ್ನ ಜೀವನದ ಧ್ಯೇಯವು ಯಾವುದೆಂಬುದನ್ನು ಊಹಿಸಲಾರದೆ ಇದ್ದಾಗ, ಮೋಹಿನಿಗೆ ಮೆಲ್ಲಮೆಲ್ಲನೆ ಭಾವೋದಯ ವಾಗತೊಡಗಿತು. ಅವಳು ಒಂದು ದಿನ ಸುಖವಾಗಿ ಕುಳಿತಿದ್ದಾಗ, ತಾನು ಈವರೆಗೆ ಮಾಡಿದುದು ಸರಿಯೇ?—ಎಂದು ಎನಿಸಿತು.

ಎಷ್ಟೆಂದರೂ ತಪ್ಪು ಆನಂದನದಾಗಿರಲು ಕಾರಣವಿಲ್ಲ. ಯಾಕೆಂದರೆ, ನಿಜವಾಗಿಯೂ ಈ ಸಂಬಂಧದಲ್ಲಿ ಅವನು ಮಾಡಿ ದುದೇನು?—ಬರೇ ತನ್ನ ಕೊರಳಿಗೆ ಮಾಲೆ ಹಾಕಿದುದು. ಇದಕ್ಕೆ ಕಾರಣರು ಯಾರು?—ಅವನ ತಂದೆತಾಯಿಗಳೇ ಅಲ್ಲವೇ? ಅವರು ತಮ್ಮ ಮಗನು ಕುರುಡನೆಂಬುದನ್ನು ಮರೆಮಾಜಿದುದರಿಂದಲೇ ಅಲ್ಲವೇ ಇಷ್ಟೆಲ್ಲ ಅನಾಹುತವಾಯಿತು? ಇದ್ದುದನ್ನು ಹೇಳದೆ ಹೆಣ್ಣನ್ನು ನಿಶ್ಚಯಿಸಿರುವರೆಂಬುದು ಆನಂದನಿಗೆ ತಿಳಿಯದಿದ್ದು, ಎಲ್ಲವೂ ಎಲ್ಲರ ಸಮ್ಮತಿಯಿಂದಲೇ ನಡೆದಿರುವುದೆಂಬ ಭರವಸೆ ಯಿಂದಲೇ ಆತನು ತನಗೆ ಮಾಲೆ ಹಾಕಿದ್ದಿರಬಹುದು. ಇದಕ್ಕಾಗಿ ತಾನು ಅವನನ್ನು ದೂರಲಾಗದು. ದೂರತಕ್ಕವರಂತೂ ತಕ್ಕ

ಪ್ರಾಯಶ್ಚಿತ್ತ ಹೊಂದಿ ಇಹದಿಂದ ದೂರರಾಗಿರುವರು. ಇನ್ನು ತಾನು ಎಲ್ಲೆಲ್ಲಿ ಇರುವುದರ ಬದಲಿಗೆ ಆನಂದನಲ್ಲಿಯೆ ಯಾಕೆ ಇದ್ದುಬಿಡಬಾರದು? ತನಗಂತೂ ಅವನು ಪೂರಾ ಸ್ವಾತಂತ್ರ್ಯವನ್ನು ಕೊಟ್ಟಿರುವುದರಿಂದ ತಾನು ಯಾವ ವಿಷಯದಲ್ಲಿಯೂ ಅಂಜಬೇಕಾಗಿಲ್ಲ. — ಎಂದು ಮುಂತಾಗಿ ಮೋಹಿನಿಯು ಯೋಚಿಸಿದಳು. 'ಆಲೋಚನೆಯು ಕೃತಿಯ ಜನ್ಮದಾತೃ' ಎಂಬಂತೆ ಅವಳ ಆಲೋಚನೆಯು ಒಡನೆಯೆ ಕಾರ್ಯರೂಪದಲ್ಲಿ ಫಲವನ್ನೂ ಹೊಂದಿತು.

* * * *

ಆನಂದನು ಮೋಹಿನಿಯನ್ನು ಬಹಳ ಗೌರವದಿಂದ ಸ್ವಾಗತ ಮಾಡಿದನು. ವೈರಾಗ್ಯದಿಂದ ಕಲ್ಲಾದ ಅವನ ಹೃದಯ ಮಾತ್ರ ಅವಳನ್ನು ತಣ್ಣಗಾಗಿಯೆ ಬರಮಾಡಿಕೊಂಡಿತು. ಮೋಹಿನಿಗೆ ಯಾವುದರಲ್ಲಿಯೂ ಎಂತಹ ಕೊರತೆಯೂ ಬಾರದಂತೆ ನೋಡಿಕೊಳ್ಳಬೇಕೆಂದು ಆಳುಗಳಿಗೆಲ್ಲ ಕಟ್ಟಪ್ಪಣೆಯಾಯಿತು.

ಮೋಹಿನಿಯು ಬಂದ ಮೇಲಂತೂ ಆನಂದನು ತನ್ನ ಉದ್ಯಾನ ಸಂಚಾರವನ್ನೂ ವೀಣಾವಾದನವನ್ನೂ ಮತ್ತಷ್ಟು ಏಕಾಗ್ರತೆಯಿಂದಲೂ ಸ್ಥಿರಮನಸ್ಸಿನಿಂದಲೂ ಮಾಡತೊಡಗಿದನು. ಯಾವಾಗ ನೋಡಿದರೂ ಅವನು ವೈರಾಗ್ಯಭಾವದಿಂದ ವೀಣೆಯ ಸ್ವರದೊಂದಿಗೆ ಸ್ವರ ಕೂಡಿಸಿ ಹಾಡುವನು:

"ನನು ಬಹುಶೋ
　　ಗತಮುದಯಮ್,
ನನು ಬಹುಶೋ-
　　ಪ್ಯಸ್ತಮಯಮ್—
ಸ್ಫುಟದಮಲತರ ಸುಮನಸೇ,
ಪತದಮಲತರ ಸುಮನಸೇ—
ಹೃದಯಮಿದಂ
　　ಬಹು ವಿಕಸತಿ,

ಹೃದಯಮಿದಂ
ಬಹು ಮುಕುಲತಿ—
ಪತದಮಲತರ ಸುಮನಸೇ—''

ಗಾಳಿಯು ಹಾಡಿನ ಲಹರಿ-ಲಹರಿಗಳನ್ನು ತೇಲಿಸಿಕೊಂಡು ಹೋಗಿ, ಪ್ರತಿಯೊಂದು ಹೂವಿನ ಮೇಲೆ ಬಡಿದು, ಅವುಗಳ ಪರಿಮಳವನ್ನು ಅಪಹರಿಸಿಕೊಂಡು, ಮೋಹಿನಿಯ ಕಿವಿಯನ್ನೂ ಮೂಗನ್ನೂ ಹೃದಯವನ್ನೂ ತುಂಬುವುದು. ಮೋಹಿನಿಯು ತನ್ನ ಕೋಣೆಯಿಂದ ಆನಂದನ ಹಾಡನ್ನು ಮಾಯಾಸಿಬದ್ಧಳಾದಂತೆ ಆಲಿಸಿ ಮುಗ್ಧಳಾಗುವಳು. ಅದು ನಿಂತೊಡನೆ, ತಿರುಗಿ ಯಾವಾಗ ಕೇಳಿಬಂದೀತೆಂದು ಹಾರೈಸಿ ಕುಳಿತುಕೊಳ್ಳುವಳು. ಹಾಡಿನೊಳಗಿನ ಭಾವವು ಅವಳ ಹೃದಯವನ್ನು ಯಾಕೋ ನಡುಗುವಂತೆ ಮಾಡುತಿತ್ತು; ಅವಳ ಮನಸ್ಸು ಯಾವುದನ್ನೋ ಕೋರಿ, ಬಲೆಯೊಳಗೆ ಸಿಕ್ಕಿಬಿದ್ದ ಹಕ್ಕಿಯಂತೆ, ಚಡಪಡಿಸುತ್ತಲಿತ್ತು. ಅದನ್ನು ವರ್ಣಿಸಲಿಕ್ಕಾಗಲಿ, ಅದನ್ನು ಹುಡುಕಿಕೊಂಡು ಹೋಗಲಿಕ್ಕಾಗಲಿ, ಅವಳಿಗೆ ಬಾರದಾಯಿತು. ಯಾವುದೋ ಒಂದು ನಿದ್ದೆಯ ಮುಸುಕು ಅವಳ ಮೇಲಿಂದ ಕೆಳಕ್ಕೆ ಜಾರಿಬಿದ್ದಂತೆ ಅವಳಿಗೆ ಭಾಸವಾಯಿತು.

೫

ಆನಂದನ ಗಾಯನವನ್ನು ಮೋಹಿನಿಯು ದಿನ ಹೋದಂತೆ ಹೆಚ್ಚುಹೆಚ್ಚಾಗಿ ಪ್ರೀತಿಸತೊಡಗಿದಳು. ಯಾಕೆ, ಆನಂದನಲ್ಲಿಯೂ ಸಹ ಅವಳಿಗೆ ಕ್ರಮಕ್ರಮವಾಗಿ ಭಕ್ತಿಭಾವವು ಉದಯಿಸಲಾರಂಭಿಸಿತು. ಅವನನ್ನು ಮೊದಲು ದೂರದಿಂದಲೇ ನೋಡುತಿದ್ದವಳು ಈಗ ಅವನ ಹತ್ತಿರ-ಹತ್ತಿರ ಸರಿಯಹತ್ತಿದಳು.

ಕ್ರಮೇಣ, ತಾನು ಆನಂದನನ್ನು ಅಂದು, ಮದುವೆಯಾಗಿ ಬಂದ ಮೊದಲನೆಯ ಸಾರಿ, ಅಷ್ಟೇಕೆ ಜುಗುಪ್ಸೆಯಿಂದ ಕಂಡಿದ್ದೆ

ನೆಂದು ಎನಿಸತೊಡಗಿತು. ಅವನು ಕುರುಡನಾಗಿದ್ದುದು ಅವನ ತಪ್ಪೇ? ಅವನನ್ನು ಅಲ್ಲದಿದ್ದರೆ ತಾನು ಬೇರೆ ಎಂತಹ ನಿಕೃಷ್ಟ ತರಗತಿಯುವನನ್ನು ವರಿಸುತಿದ್ದೆನೋ! ಹಾ! ತಾನು ಎಂತಹ ಪ್ರಮಾದವನ್ನು ಮಾಡಿದೆನು! ಆನಂದನ ಜೀವನದೊಳಗಿನ, ತಾನು ಸುಖಮಯವಾಗಿ ಮಾಡಬಹುದಾಗಿದ್ದ ಹತ್ತು ದೀರ್ಘ ವರ್ಷಗಳನ್ನು ಅಂಧಕಾರಮಯವಾಗಿ ಮಾಡಿದೆನಲ್ಲ! ತನ್ನಿಂದ ಎಂತಹ ಅಪರಾಧವಾಯಿತು! ಇನ್ನಾದರೂ ಇದಕ್ಕೆ ಪ್ರಾಯಶ್ಚಿತ್ತ ಮಾಡಲಾಪೆನೇ?— ಎಂದು ಮುಂತಾಗಿ ಮೋಹಿನಿಯು ಹಲುಬುತ್ತ ಹಂಬಲಿಸತೊಡಗಿದಳು.

* * * *

ಅಂದು ಮುಸ್ಸಂಜೆಯ ಹೊತ್ತಾಗಿತ್ತು. ಆನಂದನು ಹೊಳೆಯ ಪಾವಟಿಗೆಗಳ ಮೇಲೆ ಕುಳಿತು ವೀಣೆಯನ್ನು ನುಡಿಸುತ್ತ ಹಾಡಿನಲ್ಲಿ ಮಗ್ನನಾಗಿದ್ದನು. ಮೋಹಿನಿಯು ಮೆಲ್ಲಮೆಲ್ಲನೆ ಅವನಿದ್ದಲ್ಲಿಗೆ ಹೋದಳು. ಆನಂದನ ಬಳಿಯಲ್ಲಿಯೆ ಪಾವಟಿಗೆಗಳ ಬದಿಯ ಪೌಳಿಯನ್ನು ಆನಿಸಿಕೊಂಡು ನಿಂತು, ಅವನ ಸಂಗೀತದಲ್ಲಿ ತಲ್ಲೀನಳಾಗಿಹೋದಳು:

**"ಯೌವನಮಪಿ**
**ಮಮ ದಲೇಷು,**
**ಅಮೃತಮಪಿ ಚ**
**ಮಮ ಸುಮೇಷು,**
**ಸುಪಿಂಚಿತಮ್,**
**ಸುಪಿಂಚಿತಮ್—**
**ಉಪಾರಮೇ!**
**ಮಧುರತಮೇ!**
**ಮಂಗಲತರ ಬಹು ಸುಷಮೇ!**

ವಿಲುಲಿತಾನಿ
    ಮೃದು ದಲಾನಿ,
ವಿಶಿಥಿಲಾನಿ
    ನವ ಸುಮಾನಿ—
    ಹೇ!
ಮಂಗಲತರ ಬಹು ಸುಷಮೇ!"

ಆನಂದನು ಬಹು ಸಮಯದ ವರೆಗೆ ಆಲಾಪಿಸಿ ಮೌನ ಹೊಂದಿದನು. ಮೋಹಿನಿಯು ಪಶ್ಚಾತ್ತಾಪದಿಂದ ಬೆಂದು ಬೇಗುದಿಗೊಂಡಳು.

"ನಾಥ! ನನ್ನನ್ನು ಕ್ಷಮಿಸಲಾರಿರಾ?" ಎಂದು ಅವಳು ಅವನ ಕಾಲಿನ ಮೇಲೆ ಬಿದ್ದಳು.

ಆದರೆ 'ನಾಥ'ನು ಕ್ಷಮಿಸಿದೆನೆಂದಾಗಲಿ, ಕ್ಷಮಿಸಲಿಲ್ಲವೆಂದಾಗಲಿ ತಿಳಿಸಲು ಯಾವ ರೀತಿಯಿಂದಲೂ ಮುಂಬರಿಯದೆ ಇದ್ದನು.

ಮೋಹಿನಿಯು ಗಾಬರಿಯಿಂದ ಎದ್ದು ನೋಡಿದಳು. ಆನಂದನು ವೀಣೆಯನ್ನು ಬಾರಿಸುವ ಸ್ಥಿತಿಯಲ್ಲಿಯೆ, ಗಾಯನದಲ್ಲಿ ತನ್ಮಯನಾದವನಂತೆ, ಇದ್ದನು. ಆದರೆ ಜೋಲುಬಿದ್ದ ಅವನ ಮುಖದಲ್ಲಿ ಪ್ರಾಣದ ಚಿಹ್ನೆಯೆ ಇರಲಿಲ್ಲ.

"ಹಾ! ನಿಜವಾಗಿಯೂ ನನ್ನ ಕೈ ಬಿಟ್ಟಿರಾ!" ಎಂದು ಮೋಹಿನಿಯು ಮೂರ್ಛೆಗರಿಸಿ ಹಿಂದೆ ಬಿದ್ದಳು.

ಹಿಂದಿನಿಂದ ನೇತ್ರಾವತಿಯು, ತುಂಬಿದ ನೀರಿನಿಂದ ಮೊರೆಯುತ್ತ, ಹರಿಯುತಿದ್ದಳು.

"ಯಾರು ಕೈಬಿಟ್ಟರೂ ನಾ ನಿನ್ನ ಕೈ ಬಿಡೆ; ಬಾ, ಮಗೂ!" ಎಂದು ನೇತ್ರಾವತಿಯು ಮೋಹಿನಿಯನ್ನು ತಬ್ಬಿಕೊಂಡು ಮುಂದಕ್ಕೆ ಹರಿದಳು.

# ಅಮೃತದಲ್ಲಿ ವಿಷ

ಅನಂತನು ಹಾಸಿಗೆಯಲ್ಲಿ ಮಲಗಿ ಎರಡು ಘಂಟೆಯಾಗಿದ್ದರೂ ಅವನಿಗೆ ಇನ್ನೂ ಕಣ್ಣಿಗೆ ಕಣ್ಣು ಹತ್ತಿರಲಿಲ್ಲ.

ಇದರ ಕಾರಣವು ಅವನ ಶಾರೀರಿಕ ಪರಿಸ್ಥಿತಿ ಎನ್ನಲೇ?—ಆದರೆ, ಅವನು ಚಿಕ್ಕಂದಿನಿಂದಲೂ ದೃಢಕಾಯನಾಗಿದ್ದು, ನಿತ್ಯ ನೀರೋಗಿಯಾಗಿರುವನಲ್ಲ! ಹವೆಯು ವಿಷಮತೆ ಎನ್ನಲೇ?—ಆದರೆ, ಮಳೆಗಾಲದ ಸುಖಕರವಾದ ತಂಪು ಎಲ್ಲೆಲ್ಲಿಯೂ ತಾನೇತಾನಾಗಿದ್ದು, ಪ್ರಕೃತಿಯೆಲ್ಲವೂ ನಟ್ಟಿರುಳ ಕತ್ತಲೆಯ ಮುಸುಕಿನಲ್ಲಿ ಶಾಂತವಾಗಿ ಪವಡಿಸಿರುವುದಲ್ಲ! ಆರ್ಥಿಕ ಸಂಕಷ್ಟ ಎನ್ನಲೇ?—ಆದರೆ, ಅವನು ಹಿರಿಯರ ಅಪಾರ ಆಸ್ತಿಗೆ ಒಬ್ಬನೇ ಉತ್ತರಾಧಿಕಾರಿಯಾಗಿದ್ದು, ಅವನ ಉತ್ಪನ್ನವು ಚಿನ್ನದ ಅನ್ನ ಉಂಡರೂ ಕರಗಲಾರದಷ್ಟಾಗಿರುವುದಲ್ಲ!

ಹಾಗಾದರೆ ಅನಂತನ ಇಂದಿನ ಈ ಅನಿದ್ರೆಯ ಕಾರಣವು ಮಾನಸಿಕ ಅಶಾಂತತೆಯೆ ಆಗಿದ್ದಿರಬೇಕು. ಆದರೆ, ಅವನಿಗೆ ಈ ದಿನ ತಾನೇ ವಧು ನಿಶ್ಚಯವಾಗಿದ್ದಳು: ಎಲ್ಲ ವಿಷಯಗಳಲ್ಲಿಯೂ ಅವನಿಗೆ ಅನುರೂಪಳಾದಂತಹ ವಧು—ರೂಪದಲ್ಲಿ, ಗುಣದಲ್ಲಿ, ವಿದ್ಯೆಯಲ್ಲಿ,—ಎಲ್ಲಕ್ಕೂ ಮೇಲಾಗಿ, ಕುಲದಲ್ಲಿ. ಹೀಗಿರುವಾಗ ಅವನ ಮನಸ್ಸಿಗೆ ಅಶಾಂತತೆಯಾದರೂ ಹೇಗಾಗಬೇಕು? ಇಂತಹ ಸಂದರ್ಭದಲ್ಲಿರುವವರಿಗೆ ಮುಂದೆ ತಮ್ಮ ಮನದನ್ನೆಯೊಂದಿಗೆ ಪಡೆಯಲಿರುವ ಸುಖದ ಕನವರಿಕೆಯು ಹಲವು ಘಂಟೆಗಳ ವರೆಗೆ, ಒಂದೊಂದು ವೇಳೆ ಇಡೀ ರಾತ್ರಿ, ಎಚ್ಚರವಿರಿಸುವುದೇನೋ ಸ್ವಾಭಾವಿಕವೇ. ಆದರೆ ಅವರು ಆ ಗಳಿಗೆಗಳಲ್ಲಿ ಸ್ವರ್ಗಸುಖದ ಆನಂದ

ವನ್ನೇ ಅನುಭವಿಸುತ್ತಿದ್ದು, ಅದನ್ನು ತಮ್ಮ ಚರ್ಯೆಗಳಿಂದ ಹೊರ ಜಗತ್ತಿಗೆ ತೋರ್ಪಡಿಸುವರಲ್ಲವೇ? ಅನಂತನ ಹೊರಗಿನ ಚರ್ಯೆ ಗಳೇನೂ ಅಂತಹ ಆನಂದವನ್ನು ಸೂಚಿಸುತ್ತಿರಲಿಲ್ಲ; ಆದುದರಿಂದ, ಅವನ ಇಂದಿನ ಮಾನಸಿಕ ಅಶಾಂತತೆಗೆ ಯಾವುದೋ ಒಂದು ಸೈರಿಸಲಸದಳವಾದ ವ್ಯಥೆಯೆ ಕಾರಣವಾಗಿದ್ದಿರಬೇಕೆಂದು ತೋರು ತಿತ್ತು.

ಹನ್ನೆರಡು ಘಂಟೆ ಬಡಿಯುತ್ತಲೇ ಅನಂತನು ಹಾಸಿಗೆಯಲ್ಲಿ ಇನ್ನು ಹೊರಳಾಡಲಾರದಾದನು. ಒಡನೆ ಅವನು ಒಂದು ದೊಡ್ಡ ನಿಟ್ಟುಸಿರನ್ನು ಬಿಟ್ಟು, ಹಾಸಿಗೆಯಿಂದ ಎದ್ದು ದೀಪವನ್ನು ಹಚ್ಚಿ ದನು. ಮೇಜಿನ ಬಳಿಯಲ್ಲಿದ್ದ ಒಂದು ಕುರ್ಚಿಯನ್ನು ಕಿಟಿಕಿಯ ಹತ್ತಿರಕ್ಕೆ ಕೊಂಡೊಯ್ದು ದೀಪಕ್ಕೆ ಬೆನ್ನು ತಿರುಗಿಸಿ ಕುಳಿತನು. ಅವನ ಮುಂದಿನ ಕಿಟಿಕಿಯಿಂದ ಬಾಹ್ಯಪ್ರಪಂಚವು, ಆಗಿಂದಾಗ ಮಿಂಚಿನ ಹೊಳಪಿನಲ್ಲಿ, ಕವಿದುಕೊಂಡ ಕಗ್ಗತ್ತಲನ್ನು ತೂರಿಕೊಂಡು, ಅವನನ್ನು ಅಣಕಿಸುತಿತ್ತು. ಹಾಗೆಯೆ ಮುಂದೆ ದಿಟ್ಟಿಸುತ್ತ ಕುಳಿ ತಂತೆಯೆ ಅವನಿಗೆ ಆಕಾಶವು ಗುಡುಗಿನ ಮೂಲಕ ಅವನ ಮೇಲೆ ತನ್ನ ಕೋಪವನ್ನು ಕಾರುತಿದ್ದಂತೆ ತೋರಿತು; ಮರಗಿಡಗಳ ಮೇಲಿಂದ ಬೀಸಿಕೊಂಡು ಸುಯ್ಯನೆ ಸುಳಿಯುತಿದ್ದ ತಂಗಾಳಿಯು ಅವನ ಮೇಲಿನ ತನ್ನ ತುಚ್ಛೀಕಾರವನ್ನು ವ್ಯಕ್ತಪಡಿಸುತಿದ್ದಂತೆ ಭಾಸ ವಾಯಿತು. ಅನಂತನು ತನ್ನ ಮುಖವನ್ನು ಕೈಬೊಗಸೆಯಿಂದ ಮುಚ್ಚಿಕೊಂಡು, ಧಾರೆಧಾರೆಯಾಗಿ ಕಣ್ಣೀರನ್ನು ಸುರಿಸತೊಡಗಿ ದನು.

ಸ್ವಲ್ಪ ಸಮಯ ಸಾಗುತ್ತಲೇ, ಕಣ್ಣೀರು ಮಿಡಿದುದರ ಫಲ ವಾಗಿ, ಅನಂತನ ಮನದ ಉಮ್ಮಳವು ತುಸು ಹತೋಟಿಗೆ ಬಂದಂತಾ ಯಿತು. ಅವನು ಭಾರವಾದ ಕಣ್ಣುಗಳಿಂದ ಕಿಟಿಕಿಯಿಂದ ಹೊರಗೆ ಗುರಿಯಿಲ್ಲದೆ ನೋಡುತ್ತ ಕುಳಿತನು. ಅವನ ತಲೆಯೊಳಗೆ ಯೋಚ

ನೆಯು ಸಿಡಿಗುಂಡುಗಳು ಹಾರುತ್ತಲೇ ಇದ್ದುವು. ಎಷ್ಟು ಸಮಯ ಹಾಗೆ ಕುಳಿತಿದ್ದನೋ ತಿಳಿಯದು. ಹಾಗೆಯೆ ಅವನಿಗೆ ಮಿಂಚಿನ ಬೆಳಕಿನಲ್ಲಿ ಹೊರಗೆ ತೋಟದಲ್ಲಿ ಅಕಸ್ಮಾತ್ತಾಗಿ ದೃಗ್ಗೋಚರಿಸಿದ ಒಬ್ಬ ತರುಣಿಯು ಅವನನ್ನು ಯೋಚನಾಸಾಮ್ರಾಜ್ಯದಿಂದ ಇಹ ಲೋಕಕ್ಕೆ ಮರಳಿಸಿದಳು.

ಅನಂತನು ಕುತೂಹಲದಿಂದ ಅವಳನ್ನೇ ದಿಟ್ಟಿಸುತ್ತಿದ್ದಂತೆಯೆ, ಆ ತರುಣಿಯು ಮೆಲ್ಲಮೆಲ್ಲನೆ ಅವನ ಕಡೆಗೇ ಬರತೊಡಗಿದಳು. ಕಡೆಗೆ ಮೆಟ್ಟಿಲನ್ನೂ ಹತ್ತಿ ಹೊರಜಗಲಿಯ ಮೇಲೆ, ಕಿಟಿಕಿಯ ಹತ್ತಿರವೇ, ಬಂದು ನಿಂತಳು.

ಆಗ ಒಳಗಿನ ದೀಪದ ಬೆಳಕು ತರುಣಿಯ ಮುಖದ ಮೇಲೆ ಸರಿಯಾಗಿ ಬೀಳಲು, ಅನಂತನು ಚಿತ್ರನೆ ಚೀರಿದನು:

"ಇದೇನು! ಶಾಂತಾ!!"

ಮರುಕ್ಷಣದಲ್ಲಿ ಅನಂತನು ಕುಳಿತಲ್ಲಿಯೆ ಮೈಮರೆತು ಬಿದ್ದು ಬಿಟ್ಟನು.

೨

ಅನಂತನು ಮೆಲ್ಲಮೆಲ್ಲನೆ ಕಣ್ತೆರೆದು ನೋಡಿದನು. ಅವನು ಹಾಸಿಗೆಯಲ್ಲಿ ಹಾಯಾಗಿ ಮಲಗಿದ್ದನು. ಅವನ ತಲೆಯು ಶಾಂತೆಯ ತೊಡೆಯನ್ನು ಆನಿಸಿಕೊಂಡಿತ್ತು. ಶಾಂತೆಯು ಒಂದು ನವಿಲು-ಗರಿಯ ಬೀಸಣಿಗೆಯಿಂದ ಅವನಿಗೆ ಗಾಳಿ ಬೀಸುತ್ತ ಇದ್ದಳು. ಅವಳ ಮುಖದ ಮೇಲೆ ದುಃಖವು, ಬಣ್ಣದಿಂದ ಬರೆದಷ್ಟು ಗಾಢ ವಾಗಿ, ವ್ಯಕ್ತವಾಗುತಿತ್ತು. ಕಣ್ಣುಗಳಿಂದ ನೀರು ಹನಿಯುತಿತ್ತು. ಆಗಿಂದಾಗ ಸೀರೆಯ ಸೆರಗಿನಿಂದ ಅದನ್ನು ಒರಸಿಕೊಳ್ಳುತಿದ್ದಳು. ಕೋಣೆಯಿಡೀ ಅವಳ ನಿಟ್ಟುಸಿರುಗಳಿಂದ ಸುಯ್‌ಗುಟ್ಟುತಿತ್ತು. ದೀಪದ ಮ್ಲಾನವಾದ ಪ್ರಕಾಶದಲ್ಲಿ ಅನಂತನಿಗೆ ತಾನು ಕನಸಿನಲ್ಲಿ ರುವೆನೋ ಎಂದು ಎನಿಸಿತು.

"ನಾಥ! ನನ್ನನ್ನು ಕ್ಷಮಿಸಲಾರಿರಾ?"

ಶಾಂತೆಯ ಈ ಮಾತುಗಳು ಅನಂತನಿಗೆ ತಾನು ಎಚ್ಚರವಾಗಿಯೆ ಇರುವೆನೆಂದು ಸಾರಿದುವು.

"ಇದೇನು! ಶಾಂತಾ! ನಿಜವಾಗಿಯೂ ಶಾಂತಾ!" ಅನಂತನು ಎದ್ದುಕುಳಿತು ತನ್ನಷ್ಟಕ್ಕೇ ಎಂದುಕೊಂಡನು.

"ಹೌದು, ಪ್ರಿಯಾ! ನಿಜವಾಗಿಯೂ ನಾನು, ಶಾಂತಾ. ನನ್ನನ್ನು ಕ್ಷಮಿಸಲಾರಿರಾ?"

"ಶಾಂತಾ! ನೀನು ಎಲ್ಲಿಂದ ಬಂದೆ?"

"ಅಲ್ಲಿಂದ; ನನ್ನನ್ನು ಕ್ಷಮಿಸಲಾರಿರಾ?" ಶಾಂತೆಯು ಮನೆಯ ಬಲ ಪಾರ್ಶ್ವಕ್ಕೆ ಕೈತೋರಿಸುತ್ತ ಎಂದಳು.

ಅನಂತನು ಅರ್ಥ ಮಾಡಿಕೊಳ್ಳಲಾರದೆ, ಬಾಯಿಯನ್ನು ಅಗಲವಾಗಿ ತೆರೆದು, ಅವಳು ತೋರಿಸಿದ ದಿಕ್ಕಿನ ಕಿಟಕಿಯಿಂದ ಹೊರಗೆ ನೋಡಿದನು. ಆಚೆಯಲ್ಲಿ ಅವನ ತೋಟದ ಅಂಚಿನಿಂದ ನೇತ್ರಾವತಿಯು ಹರಿದುಕೊಂಡು ಹೋಗುತಿದ್ದಳು. ನೇತ್ರಾವತಿಯನ್ನು ದಾಟಿದರೆ ವಿಶಾಲ ಪ್ರಪಂಚ. ಹಾಗಾದರೆ ಶಾಂತೆಯ ಮಾತಿನ ಅರ್ಥವನ್ನು ಹೇಗೆಂದು ಮಾಡಲಿ? ಅವನು ದಿಙ್ಮೂಢನಾಗಿ, ತಿರುಗಿ ಶಾಂತೆಯ ಮುಖವನ್ನು ನೋಡಹತ್ತಿದನು.

"ನನ್ನನ್ನು ಕ್ಷಮಿಸಲಾರಿರಾ?" ಶಾಂತೆಯು ಹತಾಶಳಾಗಿ ಕೇಳಿದಳು.

"ಏನೆಂದಿ? ಕ್ಷಮೆಯೇ? ಯಾವುದಕ್ಕಾಗಿ ಕ್ಷಮೆ?" ಅನಂತನು ಯೋಚನಾಪರನಾಗಿ ಕೇಳಿದನು.

"ನಿಮ್ಮ ಇಂದಿನ ಸಂತೋಷದ ಸಮಯದಲ್ಲಿ ನಿಮ್ಮನ್ನು ಕಾಡಬಂದಿರುವೆನಲ್ಲ! ಇಷ್ಟು ದಿನದಂತೆ, ನಾನು ಇಲ್ಲಿಂದ ಬಿಟ್ಟು ಹೋದಮೇಲೆ ಇದ್ದಲ್ಲಿಯೆ ಬಿದ್ದುಕೊಂಡಿರಬಾರದಿತ್ತೇ? ಆದರೆ

ನನ್ನ ಮನಸ್ಸು ತಾಳದಾಯಿತು. ಅದಕ್ಕಾಗಿಯೆ ಒಮ್ಮೆ ನನ್ನ ಬಾಳುವೆಯ ಬೆಳಕನ್ನು ನೋಡಿಕೊಂಡು ಹೋಗಲೆಂದು ಬಂದೆ. ಕ್ಷಮಿಸಲಾರಿರಾ?"

"ಶಾಂತಾ! ನನಗೇನೋ ನಾನೇ ನಿನ್ನಲ್ಲಿ ಅಪರಾಧಮಾಡಿರುವಂತೆ ಖಚಿತವಾಗಿ ತೋರುವುದು. ಹಾಗಿದ್ದು ನೀನೇ ನನ್ನನ್ನು ಕ್ಷಮಿಸಬೇಕಾಗಿರುವುದಲ್ಲವೇ?"

"ಅವಾಚ್ಯವನ್ನು ಆಡಬೇಡಿ. ನಿಜವಾಗಿಯೂ ನಾನು ನಿಮ್ಮಲ್ಲಿ ಮಹತ್ತಾದ ಅಪರಾಧವನ್ನು ಮಾಡಿರುವೆನು. ನೀವು ನನಗೆ ದೇವರು! ನೀವು ಅಪರಾಧ ಮಾಡುವುದೆಂದರೆ ಅದು ಶುದ್ಧ ಅಬದ್ಧ!"

"ಆದರೆ ಉಚ್ಚ ವಿದ್ಯಾಭ್ಯಾಸದ ಅವಸರದಲ್ಲಿ ನನ್ನ ಧರ್ಮಪತ್ನಿಯಾದ ನಿನ್ನನ್ನು ಅಷ್ಟು ವರ್ಷ ಅಲಕ್ಷ್ಯಭಾವದಿಂದ ಇಲ್ಲಿಯೆ ಬಿಟ್ಟು, ನಾನು ದೂರದ ಊರುಗಳಲ್ಲಿ ಇದ್ದುದರಿಂದಲ್ಲವೇ ಈ ಅನರ್ಥಕ್ಕೆ ಕಾರಣವಾಯಿತು?"

"ಹಾಗೆ ಎನ್ನಬೇಡಿ! ಮನುಷ್ಯರಾಗಿ ಹುಟ್ಟಿದವರು ಜ್ಞಾನವನ್ನು ಸಂಪಾದಿಸುವುದು ನ್ಯಾಯ, ಧರ್ಮ. ಯಾವಳೋ ಒಬ್ಬ ಮೂರ್ಖಳನ್ನು ತಂದು ಕೊರಳಿಗೆ ಕಟ್ಟಿಬಿಟ್ಟಿರುವರೆಂಬ ಕಾರಣದಿಂದ, ಅವಳನ್ನು ಸಂತೋಷಪಡಿಸುವುದಕ್ಕಾಗಿ, ಜ್ಞಾನಾರ್ಜನೆಯನ್ನು ಬಿಟ್ಟುಬಿಡುವುದು ಸರಿಯೇ? ನೀವು ಮಾಡಿದುದರಲ್ಲಿ ಎಂತಹ ತಪ್ಪೂ ಇಲ್ಲ."

"ನೀನು ಜ್ಞಾನಾರ್ಜನೆಯ ವಿಷಯವಾಗಿ ಎಂದುದನ್ನು ನಾನು ಒಪ್ಪುವೆನು. ಆದರೆ ಅದರೆಡೆಯಲ್ಲಿಯೆ ನಾನು ನಿನ್ನ ವಿಷಯದಲ್ಲಿಯೂ ಎಚ್ಚರವಿಡಬೇಕಿತ್ತು. ನಿನ್ನ ಸುಖಸೌಕರ್ಯಗಳ ಕಡೆಗೂ ಲಕ್ಷ್ಯಕೊಡಬೇಕಿತ್ತು. ನಾನು ಎಂತಹ ಪಾಷಂಡಿಯಾದೆ!"

"ಅಯ್ಯೋ, ಯಾಕೆ ಹಾಗೆನ್ನುವಿರೋ ನನಗೆ ತಿಳಿಯದು! ನಾನು ಇಲ್ಲಿದ್ದಾಗ ನೀವಾಗಿಯೆ ನನ್ನ ಆವಶ್ಯಕತೆಗಳ ಕಡೆಗೆ ಲಕ್ಷ್ಯಕೊಡದಿದ್ದರೆ ಏನಾಯಿತು? ಅತ್ತೆಮ್ಮನವರೂ ಮಾವಯ್ಯನವರೂ ನನಗೆ ಏತರ ಕೊರತೆಯೂ ಬಾರದಂತೆ ನೋಡುತ್ತಿರಲಿಲ್ಲವೇ?"

೩

"ಶಾಂತಾ! ನಾನು ಹತಭಾಗಿ! ಇಲ್ಲದಿದ್ದರೆ ಇಂತಹ ಸದ್ಗುಣಿಯಾದ ನಿನ್ನನ್ನು ಕಳೆದುಕೊಳ್ಳುತಿದ್ದೆನೇ? ನಿನ್ನನ್ನು ಬಹು ವಿಧದಿಂದ ಉಪಟಳ ಕೊಟ್ಟು ಬಳಲಿಸಿ, ಅಳಲಿಸಿ, ಅಳಿಸಿ, ಕಡೆಗೆ ನನ್ನಿಂದ ಅಗಲಿಸಿಯೂ ಬಿಟ್ಟ ಅಮ್ಮನಲ್ಲಿ ಹಗೆಯನ್ನು ಕಟ್ಟಿಕೊಳ್ಳದೆ, ಈ ರೀತಿ ಸದಭಿಪ್ರಾಯವನ್ನೇ ಇಟ್ಟುಕೊಂಡಿರುವೆ! ನೀನು ಹಾಗೆಂದರೂ ನಿಜವಾದ ಸ್ಥಿತಿಯನ್ನು ನಾನು ಅನೇಕರಿಂದ ತಿಳಿದುಕೊಂಡಿರುವೆನು: ಹಳೆಯ ಸಂಪ್ರದಾಯವನ್ನು ಅನುಸರಿಸುತ್ತಿರುವ ಅಮ್ಮನು ಸೊಸೆಯನ್ನು ಆಳುವ ವಿಷಯದಲ್ಲಿಯೂ ಪೂರ್ತಿಯಾಗಿ ಹಳೆಯ ಕ್ರಮವನ್ನೇ ಅನುಸರಿಸಿದ್ದಳಂತೆ. ನಿನ್ನಿಂದ ಇಡೀ ದಿನ ಹಾಳು ಮನೆಗೆಲಸ ಮಾಡಿಸುತಿದ್ದು, ನೀನು ಮಾಡಿದುದರಲ್ಲೆಲ್ಲ ಬೇಕೆಂತಲೇ ಹುಳುಕುಗಳನ್ನು ಹುಡುಕುತಿದ್ದಳಂತೆ. ನಿನ್ನ ತಪ್ಪಿಲ್ಲದಿದ್ದರೂ, ಇಡೀ ದಿನ ಅಲ್ಲದ-ಸಲ್ಲದ ದೋಷಗಳನ್ನು ನಿನ್ನ ಮೇಲೆ ಆರೋಪಿಸಿ, ನಿನ್ನನ್ನು ಕ್ರೂರ ರೀತಿಯಿಂದ ಶಿಕ್ಷಿಸುತಿದ್ದಳಂತೆ. ಇದಕ್ಕೆಲ್ಲ ನನ್ನ ಕುರುಡುಗಣ್ಣೇ ಕಾರಣವಲ್ಲವೇ? ಹಾಗಿದ್ದು ನಾನು ತಪ್ಪುಗಾರನಲ್ಲ ಹೇಗೆ?"

"ನಿಮಗೆಲ್ಲ ಯಾರೋ ಕಲ್ಪಿಸಿ ಹೇಳಿರುವರು."

"ಶಾಂತಾ! ಬೇಕೆಂದೇ ಹಾಗೆ ಎನ್ನಬೇಡ. ನನಗೆ ಯಾರೂ ಕಲ್ಪಿಸಿ ಹೇಳಿಲ್ಲ. ಎಲ್ಲಕ್ಕೂ ನನಗೆ ರುಜುವಾತು ದೊರೆತಿದೆ.

ನಂಬಿಗಸ್ತರೇ ಹೇಳಿದುದನ್ನು ಕೇಳಿರುವೆನು. ನೀನು ಏನೂ ಎನ್ನು. ನಾನು ಅಪರಾಧಿಯೇ ಸೈ,—ನಿನ್ನ ಇಡೀ ಜೀವಮಾನವನ್ನು ಮಣ್ಣುಪಾಲಾಗಿಸಿದ ಚಂಡಾಲನೇ ಸೈ!"

"ನನ್ನ ಜೀವಮಾನವೇಕೆ ಮಣ್ಣುಪಾಲಾಯಿತು? ನಾನು ಸುಖದಿಂದಲೂ ತೃಪ್ತಿಯಿಂದಲೂ ಇರುವೆನಲ್ಲ!"

"ಶಾಂತಾ! ಶಾಂತಾ!! ಇದೇನೆನ್ನುವಿ? ಅತ್ತ ನನ್ನನ್ನು 'ನಾಥ', 'ಪ್ರಿಯ' ಎಂದು ಸಂಬೋಧಿಸಿ ಮಾತಾಡುವಿ; ಇತ್ತ ನೀನು ಸುಖದಿಂದಲೂ ತೃಪ್ತಿಯಿಂದಲೂ ಇರುವಿಯೆನ್ನುವಿ! ನಿನ್ನ ಈಗಿನ ಜೀವನದಲ್ಲಿಯೂ ನಿನಗೆ ಸುಖತೃಪ್ತಿಗಳಿರುವುವೇ?"

"ಇರಲು ಆಕ್ಷೇಪವೇನಿದೆ? ಏಕಾಕಿನಿಯಾದರೆ ಜೀವನದಲ್ಲಿ ಸುಖತೃಪ್ತಿಗಳು ಇರಬಾರದೆಂದಿದೆಯೇ? ಆದರೆ ಹೆಣ್ಣಲ್ಲವೇ? ಗಂಡನನ್ನು ಕೋರಿ, ಪ್ರೀತಿವ್ಯಂಜಕ ಮಾತುಗಳಿಂದ ಸಂಬೋಧಿಸಲು ಅನರ್ಥವೇನು?"

"ಏಕಾಕಿನಿ? ಹಾಗಾದರೆ ದಾಮೋದರನು ಏನಾದನು?"

"ಯಾವ ದಾಮೋದರ?"

"ನಿನ್ನನ್ನು ಇಲ್ಲಿಂದ ಕರೆದುಕೊಂಡು ಹೋಗಿರಲಿಲ್ಲವೇ?—ಅವನು."

"ಯಾರೆಂದರು, ನನ್ನನ್ನು ಯಾರಾದರೂ ಕರೆದೊಯ್ದಿದ್ದರೆಂದು?"

"ಯಾಕೆ, ಮನೆಯಲ್ಲಿ ಎಲ್ಲರೂ ಎಂದರು! ಊರಲ್ಲಿಯೂ ಎಲ್ಲರೂ ಇಂದಿಗೂ ಎನ್ನುವರು!"

೪

"ರಾಮ ರಾಮ! ಶಾಂತಂ ಪಾಪಂ! ನನ್ನಿಂದ ಈ ಮನೆಯಲ್ಲಿ ತೊಂದರೆಯಾಗುವುದೆಂದು ನಾನೇ ಹೋಗಿ ಬೇರೆ ಮನೆ ಮಾಡಿ

ಕೊಂಡಿದ್ದರೆ ಅಲ್ಲಿಂದಲೂ ಇತರರಿಗೆ ನನ್ನಿಂದ ಉಪದ್ರವವಾಗುವುದೇ? ಇಲ್ಲದಿದ್ದರೆ ಹೀಗೆ ವಾರ್ತೆ ಹಬ್ಬಿಸಬೇಕೇ? ಇರಲಿ, ನಾನು ಪಾಪಿನಿ. ಇಲ್ಲದಿದ್ದರೆ ಹೀಗಾಗುತ್ತಿರಲಿಲ್ಲ. ನಿಮಗೆ ಹೇಗೂ ಈಗ ಬೇರೆ ವಧು ನಿಶ್ಚಯವಾಗಿರುವಳಲ್ಲ? ಅವಳು ಎಷ್ಟೋ ಪುಣ್ಯ ಗಳಿಸಿರಬೇಕು. ಅವಳನ್ನೇ ಕೂಡಿಕೊಂಡು ಸುಖವಾಗಿರಿ. ನಾನು ಹೋಗುವೆನು. ಮೊದಲಿನಂತೆಯೆ ಏಕಾಂಗಿನಿಯಾಗಿಯೆ ಇದ್ದುಕೊಂಡು ಜೀವನವನ್ನು ಸವೆಯಿಸುವೆನು."

ಶಾಂತೆಯು ಕಿಟಿಕಿಯ ಕಡೆಗೆ ಸಾಗತೊಡಗಿದಳು. ಅನಂತನು ಬೇಗನೆ ಹೋಗಿ ಅವಳ ಕೈಯನ್ನು ಹಿಡಿದುಕೊಂಡು, ಅವಳ ಮುಖವನ್ನು ತನ್ನ ಕಡೆಗೆ ತಿರುಗಿಸಿದನು. ಇಬ್ಬರ ಕಣ್ಣುಗಳೂ ಕೂಡಿದುವು.

"ಶಾಂತಾ! ನೀನೆನ್ನುವುದು ನಿಜವೇ? ನೀನು ಈಗಲೂ ನನ್ನನ್ನೇ ಪ್ರೀತಿಸುತ್ತಿರುವಿಯಾ?"

"ನನ್ನ ಕಣ್ಣುಗಳನ್ನು ಕೇಳಿರಿ!"

"ನಿನ್ನ ಕಣ್ಣುಗಳನ್ನು ಏನು ಕೇಳಲಿ! ಅವು ಪರಿಶುದ್ಧತೆಯ ಬಾವಿಗಳೇ ಆಗಿರುವುವು!"

"ಹಾಗಾದರೆ ಇನ್ನೂ ಅನುಮಾನವೇ?"

"ಶಾಂತಾ! ನಿನ್ನಲ್ಲಿ ನನಗೆ ಸ್ವಲ್ಪವೂ ಅನುಮಾನವಿಲ್ಲ; ಮೊದಲಿಂದಲೂ ಇರಲಿಲ್ಲ. ಆದರೆ ಜನರ ಕಪಟವಾಕ್ಯವು ನನ್ನನ್ನು ಇಷ್ಟು ದಿನ ಮೋಸಪಡಿಸಿತ್ತು. ಈಗ ನೀನು ನನಗೆ ಬೆಳಕು ಕಾಣಿಸಿದ. ನೀನು ಇನ್ನು ನನ್ನನ್ನು ಬಿಟ್ಟುಹೋಗಬೇಡ. ನಾನು ಬೇರೆ ಮದುವೆಯಾಗೆನು,—ಇಗೋ ಪ್ರಮಾಣಮಾಡಿ ಹೇಳುವೆನು; ನನ್ನ ಅಂತರಾತ್ಮನೇ ಇದಕ್ಕೆ ಸಾಕ್ಷಿ!"

"ಆದರೆ ಜನರು ಏನೆನ್ನುವರು? ಅವರ ಈಮುಂಚಿನ ಮಾತನ್ನು ಹಿಂದೆ ತೆಗೆದುಕೊಳ್ಳುವರೇ?"

“ಜನರು ಬೇಕಾದುದನ್ನು ಎನ್ನಲಿ. ನಾನು ಗಮನಿಸುವುದಿಲ್ಲ. ನನಗೆ ಸತ್ಯಾಂಶವೆಲ್ಲ ತಿಳಿದಿರುವುದಲ್ಲ!”

“ಆದರೆ ನಿಮ್ಮ ವಂಶವು ಘನತೆ ಪಡೆದುದು. ಜನರ ಅಭಿಪ್ರಾಯವನ್ನು ನೀವು ನಿಮಗಾಗಿ ಲಕ್ಷಿಸದಿದ್ದರೂ, ನಿಮ್ಮ ಹಿರಿಯರಿಗಾಗಿ, ಅವರು ಬಹುಕಾಲದಿಂದ ಪಾಲಿಸಿಕೊಂಡುಬಂದ ನಿಮ್ಮ ಕುಲಗೌರವಕ್ಕಾಗಿ, ಲಕ್ಷಿಸಬೇಕಾಗಿದೆ. ನಾನಂತೂ ಜನರ ಅಭಿಪ್ರಾಯದಲ್ಲಿ ಕೆಟ್ಟುಹೋಗಿರುವೆನು. ನಾನು ಇದ್ದರೂ ಇಲ್ಲದಿದ್ದರೂ ಪ್ರಪಂಚದಲ್ಲಿ ಹೆಚ್ಚು ವ್ಯತ್ಯಾಸವಾಗದು. ಆದರೆ ನಿಮ್ಮ ವಿಷಯದಲ್ಲಿ ಹಾಗಲ್ಲ: ನೀವು ಸಮಾಜದ ಒಂದು ಕೈಗಂಬವಾಗಿರುವಿರಿ. ನಿಮ್ಮ ಅದೃಷ್ಟದ ಮೇಲೆ ಎಷ್ಟೋ ಮುಂದಿಯ ಅದೃಷ್ಟವು ಆಧರಿಸಿಕೊಂಡಿರುವುದು. ನಿಮ್ಮನ್ನು ನಾನು ಸೇರಿದರೆ ನಿಮ್ಮ ಅಧಃಪತನವಾಗುವುದು ನಿಶ್ಚಯ. ಆದುದರಿಂದ ನನ್ನನ್ನು ಕ್ಷಮಿಸಿ! ನಿಮಗೆಂತೂ ವಧು ನಿಶ್ಚಯವಾಗಿರುವಳು; ಅವಳನ್ನೇ ವರಿಸಿ ಸುಖವಾಗಿರಿ! ಕುಲಗೌರವವನ್ನು ಪಾಲಿಸಿ! ಕೀರ್ತಿ ಪಡೆಯಿರಿ!”

ಅನಂತನು ಅವಳಿಗೆ ಜವಾಬುಕೊಡಲು ಹವಣಿಸುವಷ್ಟರಲ್ಲಿ ಶಾಂತೆಯು ಸಟ್ಟನೆ ಕಿಟಿಕಿಯಿಂದ ಹಾರಿ ಹೊರಗೆ ಹೋಗಿಬಿಟ್ಟಳು. ಅವನು ಹತಾಶನಾಗಿ ಅವಳನ್ನು ಹಿಂಬಾಲಿಸುತ್ತ ಕೂಗಿದನು:

“ಶಾಂತಾ! ನನ್ನನ್ನು ಬಿಟ್ಟು ಹೋಗಬೇಡ! ನಿಲ್ಲು, ನಿಲ್ಲು!”

೫

ಅನಂತನು ಕೋಣೆಯ ಹೊರಗೆ ಕಾಲಿಡುವಷ್ಟರಲ್ಲಿ, ಶಾಂತೆಯು ಜಗಲಿಯಿಂದ ಕೆಳಕ್ಕೆ ಹಾರಿದಳು. ಅವನು ನಿರಾಶೆಯಿಂದ ಕರೆಯುತ್ತ, ಅವಳು ಹೋದ ದಿಕ್ಕನ್ನೇ ಅನುಸರಿಸಿ ತೋಟದೊಳಗೆ ಓಡಿದನು:

“ಶಾಂತಾ! ನಿಲ್ಲು, ನಿಲ್ಲು!”

ಕಣ್ಣು-ಕುಕ್ಕುವ ಕಗ್ಗತ್ತಲಲ್ಲಿ, ಸುರಿಯುತ್ತಿರುವ ಜಡಿಮಳೆಯಲ್ಲಿ, ಅನಂತನು ಎಡವಿ-ತಡವಿ ಹೊಳೆಯ ದಂಡೆಯ ವರೆಗೆ ಶಾಂತೆಯ ಹಿಂದೆಯೆ ಓಡಿದನು. ಅವನ ಆರ್ತವಾದ ಕೂಗಿನಿಂದ ತೋಟವೆಲ್ಲ ಮಾರ್ನುಡಿಯತೊಡಗಿತು:

"ಶಾಂತಾ! ನಿಲ್ಲು, ನಿಲ್ಲು!" "ಶಾಂತಾ! ನಿಲ್ಲು, ನಿಲ್ಲು!"

ಹೊಳೆಯನ್ನು ಸಮೀಪಿಸುತ್ತಲೇ ಮಿಂಚು ಒಮ್ಮೆ ಪ್ರಜ್ವಲವಾಗಿ ಮಿಂಚಿ ಮರೆಯಾಯಿತು. ಅದರ ಬೆಳಕಿನಲ್ಲಿ ಅನಂತನಿಗೆ ಶಾಂತೆಯ ಮಂದಹಾಸಪೂರ್ಣವಾದ ಮುಖದಿಂದ ಕೂಡಿದ, ನವಯೌವನಯುಕ್ತವಾದ ಸುಂದರ ದೇಹಲತೆಯ ದಿಗ್ದರ್ಶನವು ಒಂದು ಕ್ಷಣ ಮಾತ್ರ ದೊರೆಯಿತು.

"ಶಾಂತಾ, ನನ್ನ ಕೈ ಬಿಡಬೇಡ!" ಎನ್ನುತ್ತ ಅನಂತನು, ತನ್ನ ಕಡೆಗೆ ನೀಡಿದ್ದ ಶಾಂತೆಯ ಕೈಯನ್ನು ಹಿಡಿದುಕೊಳ್ಳಲೆಂದು ಕೈ ಬೀಸಿದನು. ಆದರೆ ಪ್ರಯೋಜನವಾಗಲಿಲ್ಲ.

"ನೀವು ಬೇರೆ ಮದುವೆ ಮಾಡಿಕೊಂಡು ಸುಖವಾಗಿ ಬಾಳಿ. ನನ್ನ ಚಿಂತೆ ನಿಮಗೆ ಬೇಡ. ನಾನು ನೇತ್ರಾವತಿಯ ಗರ್ಭದೊಳಗಿನ ನನ್ನ ಬಹುಕಾಲದ ಮನೆಯನ್ನು ಸೇರಿ ಸುಖವಾಗಿರುವೆನು!" ಎಂದು ಶಾಂತೆಯು ಎನ್ನುವಂತೆಯೆ, ಮರುಕ್ಷಣದಲ್ಲಿ ನೀರಿನಲ್ಲಿ 'ಧಡಂ!' ಎಂದು ಶಬ್ದವಾಯಿತು.

ಮತ್ತೊಮ್ಮೆ ಮಿಂಚು ಹೊಳೆಯುವಾಗ ಅನಂತನಿಗೆ ಯಾರೂ ಕಾಣಿಸಲಿಲ್ಲ; ಅವನು ಕಾಲು ಕೊಸರಿದಂತಾಗಿ ಹೊಳೆಯ ದಂಡೆಯಲ್ಲಿ ನಿಂತಲ್ಲಿಯೆ ಬಿದ್ದುಬಿಟ್ಟನು.

೬

ಅನಂತನು ಎಚ್ಚರವಾದಾಗ ಸೂರ್ಯನು ಆಗತಾನೇ ಮೂಡಿದ್ದನು. ಅವನು ಕಣ್ಣುಗಳನ್ನು ಹೊಸಗಿಕೊಂಡು ತಾನು ಎಲ್ಲಿರುವೆ

ನೆಂದು ಅತ್ತಿತ್ತ ನೋಡಿದನು. ಅಷ್ಟರಲ್ಲಿ ಅವನಿಗೆ ಹಿಂದಿನ ರಾತ್ರಿ ನಡೆದುದೆಲ್ಲವೂ ಒಂದೊಂದಾಗಿ ನೆನಪಾಯಿತು. ತಾನು ಶಾಂತೆ ಯನ್ನು ಹಿಂಬಾಲಿಸಿಕೊಂಡು ಅಲ್ಲಿಗೆ ಬಂದುದು ನೆನಪಾಗುತ್ತಲೇ ಅವನ ಕಣ್ಣುಗಳು ಸಹಜವಾಗಿಯೆ ಹೊಳೆಯ ದಂಡೆಯ ಮೇಲಿನ ಹೊಯಿಗೆಯ ಕಡೆಗೆ ಹೊರಳಿದುವು. ಅವನಿಗೆ ತೋಟದ ಅಂಚಿ ನಿಂದ ತಾನಿದ್ದಲ್ಲಿಯ ವರೆಗೆ ತನ್ನೊಬ್ಬನ ಹೆಜ್ಜೆಯ ಗುರುತುಗಳು ಮಾತ್ರ ಕಂಡುಬಂದುವು. ಆಗ ಅವನಿಗಾದ ಆಶ್ಚರ್ಯಕ್ಕೆ ಮಿತಿ ಯಿಲ್ಲ.

ಅನಂತನು ಬಹಳ ಸಮಯದ ವರೆಗೆ ಅಲ್ಲಿಯೆ ಕುಳಿತು ಯೋಚನೆಯಲ್ಲಿ ಮಗ್ನನಾದನು. ಯೋಚಿಸುತ್ತ, ಶಾಂತೆಯು ಹಲವು ವರ್ಷಗಳ ಹಿಂದೆ ಮರೆಯಾಗಿದ್ದುದರ ನಿಜವಾದ ರಹಸ್ಯವು ಇದೇ ಎಂದು ಅವನಿಗೆ ಖಚಿತವಾಯಿತು. ಕಡೆಗೆ, ಅವಳ ಮೇಲಿನ ನಿಷ್ಕಾರಣವಾದ ಅಪವಾದವು ಈ ರೀತಿಯಲ್ಲಿ ದೂರವಾಗುವಂತಾ ದುದಕ್ಕೆ ಸಂತೋಷಪಟ್ಟನು.

ಒಡನೆ ತನ್ನ ಅಪರಾಧದಿಂದಾಗಿಯೆ ಶಾಂತೆಯನ್ನು ಕಳೆದು ಕೊಂಡೆನೆಂಬುದು ಅನಂತನ ಅಂತರಾತ್ಮನನ್ನು ಬಲುವಾಗಿ ಕಾಡ ತೊಡಗಿತು. ಹೊಳೆಯ ಕಡೆಗೆ ನೋಡುತ್ತಲೇ ಅವನಿಗೆ ದುಃಖವು ಉಕ್ಕೇರಿತು; ಕಣ್ಣುಗಳಿಂದ ಕಂಬನಿಯ ಮಳೆ ಕರೆಯಿತು. ಗಂಟಲು ಬಿಗಿದುಕೊಂಡುಬರಲು, ಅನಂತನು ಗದ್ಗದವಾದ ಸ್ವರದಲ್ಲಿ, ಗಂಭೀರವಾಗಿ ಪ್ರತಿಜ್ಞೆ ತೊಟ್ಟನು:

"ಶಾಂತಾ! ನಿನ್ನ ನಲ್ಮೆಯ ನೆನಪೇ ನನಗೆ ಸಾಯುವ ತನಕ ಸಂಗಾತಿಯಾಗಿದ್ದರೆ ಸಾಕು. ಈ ಜನ್ಮದಲ್ಲಿ ಎಷ್ಟು ಮಾತ್ರಕ್ಕೂ ಬೇರೆ ಮದುವೆಯಾಗೆನು,—ಇದೇ ನನ್ನ ಘೋರವಾದ ಅಪರಾಧಕ್ಕೆ ತಕ್ಕ ಪ್ರಾಯಶ್ಚಿತ್ತ!"

# ಅಳಿಲ ಸೇವೆ ಗ್ರಂಥಮಾಲೆ

| | | | |
|---|---|---|---|
| ೧. | ಅಳಿಲ ಸೇವೆ* | (ಕವಿತಾ ಸಂಕಲನ) | ೦—೨—೦ |
| ೨. | ,, ,, (ದ್ವಿತೀಯ ಖಂಡ)* | ,, | ೦—೨—೦ |
| ೩. | ತಾಯ್ನಾಡು* . . | ,, | ೦—೨—೦ |
| ೪. | ಅಲರು . . . | ,, | ೦—೪—೦ |
| ೫. | ನಮ್ಮ ಕತೆಗಳು* . . . | | ೦—೬—೦ |
| ೬. | ವಿನೋದ ಚಿತ್ರಗಳು (ದ್ವಿತೀಯ ಮುದ್ರಣ) | (ಹಾಸ್ಯ ಪ್ರಬಂಧಗಳು) | ೦-೧೦—೦ |
| ೭. | ಸಂಸಾರ . | (ಏಕಾಂಕ ನಾಟಕಗಳು) | ೦-೧೨—೦ |
| ೮. | ಶಕುಂತಳೆ (ದ್ವಿತೀಯ ಮುದ್ರಣ) . | | ೦—೮—೦ |
| ೯. | ತರಂಗ . | (ಹಾಸ್ಯ ಪ್ರಬಂಧಗಳು) | ೦—೬—೦ |
| ೧೦. | ನಮ್ಮ ಕವಿತೆಗಳು . . . | | ೧—೪—೦ |
| ೧೧. | ಅಂದಿನ ಆವೂರು | (ಹಳ್ಳಿಯ ಚಿತ್ರಗಳು) | ೧—೦—೦ |
| ೧೨. | ನೆರೆಮನೆಯ ಹುಡುಗಿ | (ಸಚಿತ್ರ ಸಣ್ಣ ಕತೆಗಳು) | ೧-೧೦—೦ |

* ಇವು ಪುನರ್ಮುದ್ರಿತವಾಗಲಿವೆ.

**ಕಾರ್ಯದರ್ಶಿ, ಮಿತ್ರಮಂಡಳಿ, ಮಂಗಳೂರು.**